# ಕರ್ನಾಟಕ ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೨೭ ಸಂಚಿಕೆ : ೦೨ ಜುಲೈ-ಡಿಸೆಂಬರ್ ೨೦೧೩



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ ಕಲಾಭವನ (ರಿ.)

೩ನೇ ಮುಖ್ಯ ರಸ್ತೆ, ನರಸಿಂಹರಾಜ ಕಾಲೋನಿ

ಬೆಂಗಳೂರು - ೧೯, ದೂರವಾಣಿ : ೨೬೬೧೫೪೭೭

ಕರ್ನಾಟಕ

# ಲೋಚನ

## ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೨೭ ಸಂಚಿಕೆ : ೦೨ ಜುಲೈ-ಡಿಸೆಂಬರ್ ೨೦೧೩

ಸಂಪಾದಕರು

**ಪ್ರೊ॥ ಜಿ. ಅಬ್ದುಲ್ ಬಷೀರ್**



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ (ರಿ)
೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು - ೫೬೦ ೦೧೯.
ದೂರವಾಣಿ : ೨೬೬೧೫೮೭೭, ೨೬೬೭೬೭೭೩
ಇ-ಮೇಲ್ : bmsritrust@gmail.com

**KARNATAKA LOCHANA** - (Half yearly Research Journal)
Editor : Prof. **G. Abdul Basheer**. Published by **B.M.Sri. Smaraka Prathistana, M.V.Si. P.G. Research Center, B.M.Sri. Kalabhavan(R),** 3rd Main Road, Narasimharaja Colony, Bangalore - 560 019. Ph.No. 080-26615877, 26676773 Pages: vi+80

Year : July-December 2013 (Vol. 27 , No. 2),

Yearly Subscription : **Rs. 100**/- (for Libraries)

For Individual : **Rs. 50/-**

ವಾರ್ಷಿಕ ಚಂದಾ : ರೂ. ೧೦೦/- (ಗ್ರಂಥಾಲಯಗಳಿಗೆ)

ವ್ಯಕ್ತಿಗಳಿಗೆ : ರೂ. ೫೦/-

ಕರ್ನಾಟಕ ಲೋಚನದ ಆಜೀವ ಚಂದಾ : ರೂ. ೫೦೦/-

ಪ್ರತಿಷ್ಠಾನದ ಆಜೀವ ಸದಸ್ಯತ್ವ : ರೂ. ೧೦೦೦/-



ಮುದ್ರಣ
**ಚಂದನ ಪ್ರಿಂಟರ್ಸ್**
೩೧೨, ೭ನೇ ಮೇನ್
ನಾಗೇಂದ್ರ ಬ್ಲಾಕ್
ಬನಶಂಕರಿ ೧ನೇ ಹಂತ
ಬೆಂಗಳೂರು-೫೬೦ ೦೫೦

# ಮುಂಮಾತು

ಇಪ್ಪತ್ತೈದು ವರ್ಷಗಳಿಂದ ಪ್ರಕಟವಾಗುತ್ತಿರುವ 'ಕರ್ನಾಟಕ ಲೋಚನ' ಬಿ.ಎಂಶ್ರೀ. ಸ್ಮಾರಕ ಪ್ರತಿಷ್ಠಾನದ ಸ್ಥಾಪಕ ಪ್ರೊ. ಎಂ.ವಿ, ಸೀತಾರಾಮಯ್ಯ ಅವರ ಕನಸಿನ ಕೂಸು. ಪ್ರತಿಷ್ಠಾನವು ಸಂಶೋಧನ ಕೇಂದ್ರವಾಗಬೇಕೆಂದು ಕನಸು ಕಂಡಿದ್ದ ಅವರು, ಆ ಕನಸು ನಿಧಾನವಾಗಿ ನನಸಾಗುತ್ತಿದ್ದುದನ್ನು ಗಮನಿಸಿ, ನಾಡಿನ ವಿವಿಧೆಡೆಯಲ್ಲಿ ಕನ್ನಡ ಸಂಸ್ಕೃತಿಗೆ ಸಂಬಂಧಿಸಿದಂತೆ ನಡೆಯುತ್ತಿದ್ದ ಸಂಶೋಧನ ಲೇಖನಗಳಿಗೆ ವೇದಿಕೆಯಾಗಬೇಕೆಂಬ ಉದ್ದೇಶದಿಂದ ಈ ಅರ್ಧವಾರ್ಷಿಕ ಪತ್ರಿಕೆಯನ್ನು ಪ್ರಾರಂಭಿಸಿದರು. ಅವರ ಆಶಯಕ್ಕೆ ಅನುಗುಣವಾಗಿ ಉನ್ನತ ಗುಣಮಟ್ಟದ ಸಂಶೋಧನ ಲೇಖನಗಳನ್ನು ಹೊತ್ತು ಪತ್ರಿಕೆಯು ಪ್ರಕಟವಾಗುತ್ತಿದೆ. ಕನ್ನಡ ನಾಡಿನ ಅನೇಕ ವಿಶ್ವವಿದ್ಯಾನಿಲಯಗಳಂತಹ ಉನ್ನದ ಅಧ್ಯಯನ ಕೇಂದ್ರಗಳು ನಡೆಸಿಕೊಂಡು ಬರುತ್ತಿದ್ದ ಸಂಶೋಧನೆಗೆ ಮೀಸಲಾದ ನಿಯತಕಾಲಿಕೆಗಳಲ್ಲಿ ಅನೇಕವು ಈಗಾಗಲೇ ನಿಂತುಹೋಗಿವೆ. ಹಾಗಾಗದೆ ಇದನ್ನು ಆದಷ್ಟೂ ನಿಗದಿತ ವೇಳೆಗೆ ಹೊರತರುವ ಉದ್ದೇಶ ಪ್ರತಿಷ್ಠಾನದ್ದು. ಆದರೆ ದಿನೇ ದಿನೇ ಗುಣಮಟ್ಟದ ಲೇಖನಗಳ ಕೊರತೆ ಎದ್ದು ಕಾಣುತ್ತಿದೆ; ಹೀಗಾಗಿ ಮೈದುಂಬಿಕೊಂಡು ಪತ್ರಿಕೆ ಬರಲು ಅಡ್ಡಿಯೇ ಎನ್ನಬಹುದು. ಪತ್ರಿಕೆಯ ಮುದ್ರಣವ್ಯವಸ್ಥೆಗೆ ವಿಳಂಬವೇನಾಗದು, ಆದರೆ ಕೆಲವು ವೇಳೆ ಸಾಕಷ್ಟು ಲೇಖನಗಳು ಕೈಸೇರದೆ ಪತ್ರಿಕೆ ತಡವಾಗಿ ಹೊರಬರುವುದು ಅನಿವಾರ್ಯವಾಗಿಬಿಡುತ್ತದೆ. ಅನೇಕ ಸಂದರ್ಭಗಳಲ್ಲಿ ಲೇಖಕರನ್ನು ಕೇಳಿಕೊಂಡು ಲೇಖನಗಳನ್ನು ಬರೆಯಿಸುವ ಶ್ರಮವನ್ನೂ ಪತ್ರಿಕೆಯ ಸಂಪಾದಕರು ವಹಿಸಿಕೊಳ್ಳಬೇಕಾಗುತ್ತದೆ. ಇದನ್ನು ಯಶಸ್ವಿಯಾಗಿ ಮಾಡಿಕೊಂಡು ಬರುತ್ತಿರುವ **'ಕರ್ನಾಟಕ ಲೋಚನ'**ದ ಸಂಪಾದಕರಾದ ಪ್ರೊ. ಜಿ. ಅಬ್ದುಲ್ ಬಷೀರ್ ಅವರು ವಹಿಸುವ ಶ್ರದ್ಧೆಯನ್ನು ಎಷ್ಟು ಕೊಂಡಾಡಿದರೂ ಸಾಲದು. ಪ್ರತಿಷ್ಠಾನದ ಕಾರ್ಯದರ್ಶಿಗಳಲ್ಲೊಬ್ಬರಾದ ಅವರು ಆಯೋಜಿಸುವ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ವಿದ್ವಾಂಸರ ದುಂಬಾಲುಬಿದ್ದು ಆದಷ್ಟೂ ಕಾಲಕ್ಕೆ ಸರಿಯಾಗಿ ಪತ್ರಿಕೆ ಹೊರಬರುವಂತೆ ಅವರು ನೋಡಿಕೊಳ್ಳುತ್ತಿದ್ದಾರೆ. ಇದಕ್ಕಾಗಿ ಅವರ ಬಗ್ಗೆ ಪ್ರತಿಷ್ಠಾನಕ್ಕೆ ವಿಶೇಷ ಮೆಚ್ಚಿಕೆ. ಆಸಕ್ತರು ಈ ಸಂಚಿಕೆಯನ್ನು ಪ್ರೀತಿಯಿಂದ ಬರಮಾಡಿಕೊಳ್ಳುವರೆಂಬುದು ನನ್ನ ನಂಬಿಕೆ.

**–ಡಾ॥ ಪಿ. ವಿ. ನಾರಾಯಣ**
ಅಧ್ಯಕ್ಷರು
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

# ಸಂಪಾದಕೀಯ

'ಕರ್ನಾಟಕ ಲೋಚನ'–ಸಂಪುಟ ೨೭, ಸಂಚಿಕೆ ೦೨, ಜುಲೈ–ಡಿಸೆಂಬರ್ ೨೦೧೩ ಸಹೃದಯರ ಕೈಗೆ ತಡವಾಗಿ ತಲುಪಲು ಲೇಖನಗಳ ಕೊರತೆಯೇ ಮುಖ್ಯ ಕಾರಣವಾಗಿದೆ. ಲೇಖಕ ಮಿತ್ರರು ವಿವಿಧ ವಿಷಯಗಳಿಗೆ ಸಂಬಂಧಿಸಿದ ಸಂಶೋಧನ ಲೇಖನಗಳನ್ನು ಕಳುಹಿಸಿಕೊಡುವ ಕೃಪೆ ಮಾಡಬೇಕೆಂದು ಕೋರುತ್ತೇನೆ. ಈ ಸಂಚಿಕೆಯಲ್ಲಿ ಪ್ರಕಟವಾಗುತ್ತಿರುವ ಲೇಖನಗಳು ವೈವಿಧ್ಯಮಯವೂ ವೈಶಿಷ್ಟ್ಯಪೂರ್ಣವೂ ಆಗಿವೆ; ಮೌಲಿಕ ವಿಚಾರಗಳನ್ನೊಳಗೊಂಡಿವೆ. ಭಾಷೆ, ಸಂಸ್ಕೃತಿ, ಸಂಶೋಧನೆ, ವಿಮರ್ಶೆ, ತೌಲನಿಕ ವಿಚಾರಗಳನ್ನೊಳಗೊಂಡ ಲೇಖನಗಳಲ್ಲಿ ನವೀನ ಆಲೋಚನೆಗಳಿವೆ; ಚರ್ಚೆಗೆ ಕಾರಣವಾಗಬಹುದಾದ ಅನೇಕ ವಿಚಾರಗಳಿವೆ. ಉದಾ: 'ವಿಶ್ವಸಂಸ್ಥೆಯ ಸಂವಿಧಾನ ಮತ್ತು ಕನಕದಾಸರು' ಎಂಬ ಪ್ರೊ॥ ವಸಂತ ಕುಷ್ಟಗಿಯವರ ಲೇಖನ ಮತ್ತು 'ಶರಣೆಯರ ವಿಚಾರಗಳ ಪ್ರಸ್ತುತತೆ' ಎಂಬ ಡಾ॥ ವಿಜಯಾ ಸುಬ್ಬರಾಜ್ ಅವರ ಲೇಖನ ಇತ್ಯಾದಿ.

'ಕರ್ನಾಟಕ ಲೋಚನ'ದ ಪ್ರಕಟಣೆಗೆ ಸಹಕರಿಸಿದ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ॥ ಪಿ. ವಿ. ನಾರಾಯಣ ಅವರಿಗೂ ಮತ್ತೋರ್ವ ಗೌ॥ ಕಾರ್ಯದರ್ಶಿಗಳಾದ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರಿಗೂ, ಕೋಶಾಧಿಕಾರಿಗಳಾದ ಶ್ರೀ ಎಂ. ಎಸ್. ರಾಮಪ್ರಸಾದ್ ಅವರಿಗೂ ಕಛೇರಿ ಸಿಬ್ಬಂದಿ ವರ್ಗದವರಿಗೂ ನಾನು ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

–ಪ್ರೊ॥ ಜಿ. ಅಬ್ದುಲ್ ಬಷೀರ್
ಸಂಪಾದಕರು

## ಪರಿವಿಡಿ


೧. ಶರಣೆಯರ ವಿಚಾರಗಳ ಪ್ರಸ್ತುತತೆ ೧

**– ಡಾ॥ ವಿಜಯಾ ಸುಬ್ಬರಾಜ್**

೨. ಕನ್ನಡ ವೈದಿಕ ರಾಮಾಯಣಗಳು ೧೨

**– ಪ್ರೊ. ಶಾಂತರಾಜು**

೩. ವಿಶ್ವ ಸಂಸ್ಥೆಯ ಸಂವಿಧಾನ ಮತ್ತು ಕನಕದಾಸರು ೨೭

**– ಪ್ರೊ॥ ವಸಂತ ಕುಷ್ಟಗಿ**

೪. ವಿದ್ಯಾಪತಿ ಬಿಲ್ಹಣನ ಪ್ರವರ ೪೦

**– ಡಾ॥ ಅರವಿಂದ ಚಂದ್ರಕಾಂತ ಶ್ಯಾನಭಾಗ**

೫. ಡಾ॥ ಬಿ. ಎ. ಸನದಿಯವರ 'ಹೊಸಶಬ್ದದ ಸಂಸಾರ'ದೊಂದಿಗೆ ೪೪

**– ಡಾ॥ ಪ್ರಮೀಳಾ ಮಾಧವ್**

೬. ಶಕ್ತಿವಿಶಿಷ್ಟಾದ್ವೈತಸಿದ್ಧಾಂತದಲ್ಲಿ ಲಿಂಗಾಂಗ ಸಾಮರಸ್ಯರೂಪ ಮೋಕ್ಷ ೫೬

**– ವಿದ್ವಾನ್ ಡಾ॥ ಕೆ.ಎಂ. ಮಹದೇವಯ್ಯ**

೭. ಚಂದ್ರ ೭೭

**– ಪ್ರೊ॥ ಜಿ. ಅಬ್ದುಲ್ ಬಷೀರ್**

ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೩

# ಶರಣೆಯರ ವಿಚಾರಗಳ ಪ್ರಸ್ತುತತೆ

–ಡಾ॥ ವಿಜಯಾ ಸುಬ್ಬರಾಜ್*

ಒಂದು ಕಾಲಘಟ್ಟದ ಚರಿತ್ರೆಯನ್ನು ಅಧ್ಯಯನ ಮಾಡುವುದೆಂದರೆ ಆ ಕಾಲದ ಸಾಹಿತ್ಯ, ಸಂಸ್ಕೃತಿ, ಧರ್ಮ, ಸಮಾಜ, ರಾಜಕೀಯ ಇತ್ಯಾದಿ ಹಲವು ಮಗ್ಗುಲುಗಳಿಂದ ಮಾಡುವ ಚಿಂತನೆಗಳನ್ನು ಒಳಗೊಳ್ಳುವುದಾಗಿದೆ. ಇತಿಹಾಸದ ಉದ್ದಕ್ಕೂ, ನಾವು ಗಮನಿಸುವಂತೆ ಅನೇಕ ಸ್ಥಿತ್ಯಂತರಗಳು, ಬದಲಾವಣೆಗಳು ರಾಜಕೀಯ, ಸಾಮಾಜಿಕ ಮತ್ತು ವೈಚಾರಿಕ ನೆಲೆಗಳಲ್ಲಿ ಉಂಟಾಗಿರುವುದು ಸ್ಪಷ್ಟವಾಗಿದೆ. ಇಂತಹ ಬದಲಾವಣೆಗಳು ವೈಚಾರಿಕ ಪ್ರಚೋದನೆಗಳಿಂದ, ಪ್ರಗತಿಪರ ಚಿಂತನೆಗಳಿಂದ ಸಾವಧಾನವಾಗಿ, ಕಾಲಾನುಕ್ರಮದಲ್ಲಿ, ಸಾಮಾಜಿಕ ನೆಲೆಯಲ್ಲಿ ಅಂತರ್ಗತವಾದ ರೀತಿಯಲ್ಲಿದ್ದು ಒಂದು ಕಾಲಘಟ್ಟದಲ್ಲಿ ಥಾಳಾಗಿ ಕಾಣಿಸಿಕೊಳ್ಳಬಹುದು; ಇಲ್ಲವಾದಲ್ಲಿ ಕೆಲವು ಮಾನವ ಚೇತನಗಳಲ್ಲಿ ರೂಢಿಗತ ವ್ಯವಸ್ಥೆ, ಪರಂಪರೆಗಳ ಬಗೆಗಿನ ಅಸಮಾಧಾನ, ಆಕ್ರೋಶಗಳು ಸುಪ್ತವಾಗಿದ್ದಂತಹವು ಕ್ರಾಂತಿಯರೂಪದಲ್ಲಿ ಸ್ಫೋಟಗೊಂಡು, ವ್ಯವಸ್ಥೆಗಳಲ್ಲಿನ ಅನ್ಯಾಯ, ಶೋಷಕ ಮನೋವೃತ್ತಿಗಳ ವಿರುದ್ಧ ಪ್ರಶ್ನಿಸಲು, ಅವುಗಳನ್ನು ಪ್ರತಿಭಟಿಸಲು ಮುಂದಾಗುತ್ತವೆ. ಸಾಮಾಜಿಕ ನ್ಯಾಯಕ್ಕಾಗಿ ಹೋರಾಟ ಅನಿವಾರ್ಯವಾಗುತ್ತದೆ.

ಸೃಷ್ಟಿಯಲ್ಲಿ ಮಾನವರೆಲ್ಲರೂ ಒಂದೇ ಆದರೂ ಕೃತಕ ಪ್ರಯತ್ನಗಳಿಂದ ಸಂಕುಚಿತ ಭಾವನೆಗಳಿಂದ ನಿರ್ಮಿಸಿಕೊಂಡ ಸಮಾಜವ್ಯವಸ್ಥೆಯಲ್ಲಿ ಜಾತಿ, ಲಿಂಗಾಧಾರದ ಮೇಲೆ ಬಹುದೊಡ್ಡ ಅಸಮಾನತೆಯ ಕಂದಕವನ್ನು ನಿರ್ಮಿಸಿ, ಪ್ರಾಣಿಗಳಿಗಿಂತಲೂ ಕೀಳಾಗಿ ಕಾಣುವಂತಹ ಒಂದು ಪರಿಸರ ಸೃಷ್ಟಿಯಾಗುತ್ತಿದ್ದ ಮಾನವರೆಲ್ಲರಿಗೂ ಸಮಾನವಾದ ಹಕ್ಕುಗಳಿಂದ ಇಂತಹ ಸಾಮಾಜಿಕ ಅನ್ಯಾಯಕ್ಕೆ ಒಳಗಾದ ಸಮುದಾಯಗಳು

* ನಂ.೫೧. 'ಹಂಸಿ', ೧ನೇ 'ಎ' ಅಡ್ಡರಸ್ತೆ, ೩೫ನೇ ಮುಖ್ಯರಸ್ತೆ, ಭವಾನಿ ಹೌಸಿಂಗ್ ಲೇ-ಔಟ್. ಬನಗಿರಿನಗರ ಬನಶಂಕರಿ ೩ನೇ ಹಂತ. ಬೆಂಗಳೂರು-೮೫. ಮೊ. : ೯೯೮೬೭೨೮೮೭೬.

ವಂಚಿತವಾಗುತ್ತವೆ. ಈ ಬಗೆಯ ಅಸಮಾನತೆ ಎಲ್ಲಾ ದೇಶದ ಎಲ್ಲ ಸಮಾಜಗಳಲ್ಲಿ ಇದ್ದೇ ಇದೆ. ಜಾತಿ, ವರ್ಣ, ಲಿಂಗಾಧಾರದ ಮೇಲೆ ಅಮಾನವೀಯ ರೀತಿಯ ಹಿಂಸೆ, ಶೋಷಣೆ, ಅನ್ಯಾಯ, ಅತ್ಯಾಚಾರಗಳಿಗೆ ಒಳಗಾಗಿರುವುದಕ್ಕೆ ಇತಿಹಾಸವೇ ಸಾಕ್ಷಿಯಾಗಿದೆ. ಭಾರತೀಯ ಸಮಾಜವೂ ಇದಕ್ಕೆ ಹೊರತಲ್ಲ.

ಬಹುಸಂಸ್ಕೃತಿಯ ಜಾತಿ, ಜನಾಂಗಗಳಿಂದ ಕೂಡಿದ ಈ ರಾಷ್ಟ್ರದ ಸಂಕೀರ್ಣ ಸಮಾಜದಲ್ಲಿಯೂ ಹಲವು ಕಾಲಘಟ್ಟಗಳಲ್ಲಿ ಹಲವು ಬಗೆಯ ಸ್ಥಿತ್ಯಂತರಗಳು ತಲೆದೋರಿವೆ; ತಲೆದೋರುತ್ತಲೇ ಇವೆ. ಜಾತಿ, ಲಿಂಗ, ವರ್ಗ ಸಂಬಂಧಿ ಧೋರಣೆಗಳಲ್ಲಿಯೂ ಬದಲಾವಣೆಗಳಾಗುತ್ತಿವೆ ಎಂಬುದು ವಾಸ್ತವವಾದರೂ ಹೆಣ್ಣಿನ ವಿಷಯಕ್ಕೆ ಬಂದಾಗ ಪುರುಷ ಪ್ರಧಾನವಾದ, ಯಜಮಾನ ಸಂಸ್ಕೃತಿಯನ್ನು ಎತ್ತಿ ಹಿಡಿಯುತ್ತಾ ಬಂದಿರುವ ಭಾರತೀಯ ಸಮಾಜದಲ್ಲಿ, ಅತ್ಯಂತ ಶೋಚನೀಯವಾಗಿದೆ. ಎಲ್ಲೋ ಅಪರೂಪಕ್ಕೆ ಅಲ್ಲೊಂದು ಇಲ್ಲೊಂದು, ಅಪರೂಪದ ಸಂಗತಿಗಳಂತೆ ಹೆಣ್ಣನ್ನು ಉದಾತ್ತವಾಗಿ ಕಂಡ, ಅಭಿವ್ಯಕ್ತಿ ಸ್ವಾತಂತ್ರ್ಯ, ಬೌದ್ಧಿಕ ಸ್ವಾತಂತ್ರ್ಯ, ವೈಯಕ್ತಿಕ ವಿಕಾಸಕ್ಕೆ ಅನುವು ಮಾಡಿಕೊಟ್ಟ ಪ್ರಸಂಗಗಳು ಕಾಣಿಸಿಕೊಂಡರೂ, ಮನುಷ್ಯ ಹೆಚ್ಚು ನಾಗರೀಕನಾಗುತ್ತಿದ್ದಂತೆ ಬೌದ್ಧಿಕವಾಗಿ ವಿಕಾಸಗೊಳ್ಳುತ್ತಿದ್ದಂತೆ ಸ್ತ್ರೀಸಂಬಂಧವಾಗಿ ಸಂಕುಚಿತ ಧೋರಣೆಯನ್ನೇ ತಳೆಯುತ್ತಾ ಬಂದ. ಜೈವಿಕವಾಗಿ ಪುರುಷನಿಂದ ಭಿನ್ನಳಾಗಿದ್ದ ಒಂದೇ ಕಾರಣದಿಂದ ಸಮಾಜ, ಸಂಪ್ರದಾಯ, ಧರ್ಮಗಳ ಹೆಸರಿನಲ್ಲಿ ಅವಳ ಮನಸ್ಸು, ಬುದ್ಧಿ, ಆತ್ಮಗಳಿಗೆ ಸಂಕೋಲೆಗಳನ್ನು ತೊಡಿಸಿ, ಮುಕ್ತ ಗಾಳಿಗೂ ಬೆಳಕಿಗೂ ಆಸ್ಪದವಿಲ್ಲದಂತೆ ಉಸಿರುಗಟ್ಟಿ ಸಾಯುವ ಪರಿಸರ ನಿರ್ಮಾಣದ ಹುನ್ನಾರ ನಡೆಸಲಾಯಿತು. ಆಕೆಯೂ ಮನುಷ್ಯಳು, ಅವಳಿಗೂ ಆತ್ಮವಿದೆ; ಆಸೆ ಆಕಾಂಕ್ಷೆಗಳಿವೆ; ಹಕ್ಕು ಅಧಿಕಾರಗಳಿವೆ; ಬೌದ್ಧಿಕ ಮಾನಸಿಕ ವಿಕಾಸಕ್ಕೆ ಅವಕಾಶಗಳಿವೆ; ಅವಳಿಗೆ ಅವಳದೇ ಆದ ಅಸ್ತಿತ್ವವಿದೆ – ಎನ್ನುವ ವಿಚಾರಗಳನ್ನು ಮರೆತೋ ಅಥವಾ ನಿರ್ಲಕ್ಷಿಸಿಯೋ, ಅವಳನ್ನು ಕೇವಲ ಪುರುಷನ ಆಸ್ತಿ; ಅವನ ಅಧೀನ. ಅವನ ಭೋಗಲಾಲಸೆಗಳನ್ನು ತಣಿಸುತ್ತಾ, ಅವನ ವಂಶವನ್ನು ಮುಂದುವರೆಸಲು ಗಂಡು ಸಂತಾನವನ್ನು ಹೆತ್ತು ಕೊಡುತ್ತಾ, ಮನೆಯ ನಾಲ್ಕು ಗೋಡೆಗಳ ನಡುವೆ ಬೆಳಕಿಗೆ ಕಣ್ಣುಮುಚ್ಚಿ, ನಿಟ್ಟುಸಿರುಗಳಲ್ಲಿ ನವೆಯುತ್ತ, ಬಿಕ್ಕುಗಳಲ್ಲಿ ಬೇಯುತ್ತ, ಪುರುಷನು ಎಸೆವ ಹಂಗಿನ ಅನ್ನವನ್ನು ಉಣ್ಣುತ್ತಾ, ತನ್ನ ವಿಧಿಗಾಗಿ ತನ್ನನ್ನೇ ಹಳಿದುಕೊಳ್ಳುತ್ತಾ ಬದುಕುವುದೊಂದೇ ಅವಳಿಗಿದ್ದ ದಾರಿಯಾಗಿತ್ತು. ಇಂತಹ ಸ್ಥಿತಿಯ ನಿರ್ಮಾಣಕ್ಕೆ ಮಾತೃ ಪ್ರಧಾನವ್ಯವಸ್ಥೆ ಪಿತೃ ಪ್ರಧಾನ ವ್ಯವಸ್ಥೆಯಾಗಿ ರೂಪಾಂತರಗೊಂಡದ್ದು! ಹೆಣ್ಣು ಎಲ್ಲ ರೀತಿಯಿಂದಲೂ ತನ್ನ ಅಂಕೆ, ಅಂಕುಶದಲ್ಲಿರಬೇಕೆಂಬುದೇ ಅವನ ಪ್ರಬಲ ಹಂಬಲವಾಗಿತ್ತು: ಇದರಿಂದಾಗಿ ಹೆಣ್ಣಿನ ಸ್ಥಿತಿ ಇನ್ನಷ್ಟು ಹದಗೆಟ್ಟು ಕುಟುಂಬ, ಖಾಸಗಿ ಆಸ್ತಿ, ಮಾತೃತ್ವ, ಮನೆತನ, ವಂಶಗೌರವ

ಇತ್ಯಾದಿ ನೆಪಗಳಲ್ಲಿ, ಪರಿಕಲ್ಪನೆಗಳಲ್ಲಿ ಅವಳನ್ನು ಗೃಹಕೃತ್ಯ, ಸಂತಾನೋತ್ಪತ್ತಿ ಇತ್ಯಾದಿ ಕ್ರಿಯೆಗಳಿಗೆ ಮಾತ್ರವೇ ಸೀಮಿತಗೊಳಿಸಲಾಯಿತು. ಜೊತೆಗೆ ಹೆಣ್ಣಿನಲ್ಲಿ ಉಂಟಾಗುವ ನೈಸರ್ಗಿಕ ಬದಲಾವಣೆಯ ರೂಪವಾಗಿ ಉಂಟಾಗುವ ಮಾಸಿಕ ಋತು ಅಥವಾ ರಕ್ತಸ್ರಾವಗಳನ್ನು ಮೈಲಿಗೆಯೆಂದು, ಅಪವಿತ್ರ ಸ್ಥಿತಿಯೆಂದು ಪರಿಗಣಿಸಿ, ಪವಿತ್ರವಾದ ಧಾರ್ಮಿಕ ಕ್ರಿಯೆಗಳಿಂದ, ಅಧ್ಯಾತ್ಮ ಸಾಧನೆಗಳಿಂದ ದೂರವಿರಿಸಲಾಯಿತು. ವ್ಯಕ್ತಿತ್ವ ವಿಕಸನ, ಬೌದ್ಧಿಕ ವಿಕಸನಗಳಿಗೆ ಸಾಧನವಾಗಬಲ್ಲ ಜ್ಞಾನ ಸಂಪಾದನೆಯ ಎಲ್ಲ ಅವಕಾಶಗಳಿಂದ ವಂಚಿಸಿದ್ದೇ ಅಲ್ಲದೆ ಆರ್ಥಿಕ ಸ್ವಾವಲಂಬನೆಯ ಕಲ್ಪನೆಯೂ ಸಾಧ್ಯವಿಲ್ಲದಂತೆ ಮಾಡಿ ಸಂಪೂರ್ಣವಾಗಿ ಪುರುಷಾಧಾರಿತಳಾಗಿ ಬಾಳುವ ಹತಾಶ ಸ್ಥಿತಿಗೆ ಅವಳನ್ನು ದೂಡಲಾಯಿತು.

ವೇದಕಾಲದ ಸ್ತ್ರೀಪರವಾದ ಉದಾತ್ತ, ಉದಾರ ನಿಲುವುಗಳು ಕಾಲಕ್ರಮೇಣ ನಿಷ್ಠುರವಾದವು. ಸಾಮಾಜಿಕ, ಧಾರ್ಮಿಕ ಚಟುವಟಿಕೆಗಳಿಗೆ ಪ್ರವೇಶ ನಿಷಿದ್ಧವಾಯಿತು. ಜೊತೆಗೆ ಬಾಲ್ಯವಿವಾಹ, ಸತಿ ಪದ್ಧತಿಯಂತಹ ಸಾಮಾಜಿಕ ಅನಿಷ್ಠ ಪದ್ಧತಿಗಳು ಹೆಣ್ಣನ್ನು ಮತ್ತಷ್ಟು ದುರಂತದ ಪ್ರಪಾತದತ್ತ ದೂಡಿದವು; ಸ್ಮೃತಿಗಳು ಹೆಣ್ಣುಕುಲಕ್ಕೆಂದೇ ರಚಿತವಾದ ನೀತಿ ಸಂಹಿತೆಗಳಾಗಿ ಚಲಾವಣೆಗೆ ಬಂದವು. ನಾರದ ಸ್ಮೃತಿ, ಮನುಸ್ಮೃತಿ, ಹೆಣ್ಣಿಗೆಂದು ವಿಧಿ ನಿಷೇಧಗಳ ದೊಡ್ಡ ಪಟ್ಟಿಯನ್ನೇ ಮುಂದಿಟ್ಟವು. ನಾರದ ಸ್ಮೃತಿಯಲ್ಲಿ "ಶಾಸ್ತ್ರಾಧ್ಯಯನಾನಧಿಕಾರಿತ್ವಾತ್ ಶಾಸ್ತ್ರ ಮಂತ್ರೋಪಜೀವಿ ಧರ್ಮಾಧರ್ಮ ಜ್ಞಾನಾಭಾವಾತ್ ಅಸ್ವಾತಂತ್ರ್ಯಂ" [ಶಾಸ್ತ್ರಾಧ್ಯಯನಕ್ಕೆ ಅನಧಿಕಾರಿಯಾದ್ದರಿಂದ, ಶಾಸ್ತ್ರಾಧ್ಯಯನದ ಮೂಲಕ ಸಾಧ್ಯವಾಗಿಸಿಕೊಳ್ಳಬಹುದಾಗಿದ್ದ ಧರ್ಮಾಧರ್ಮ ಜ್ಞಾನದ ಕೊರತೆಯಿಂದ ಸ್ತ್ರೀಗೆ ಸ್ವಾತಂತ್ರ್ಯವಿಲ್ಲ] –ಎಂದು ಹೇಳಿ, ಅವಳನ್ನು ಸಂಪೂರ್ಣವಾಗಿ ಅಧ್ಯಯನ, ಧರ್ಮಜ್ಞಾನ ಮುಂತಾದವುಗಳಿಂದ ದೂರವಿರಿಸಲಾಯಿತು. 'ಮನುಸ್ಮೃತಿ' ಇನ್ನೂ ಮುಂದುವರೆದು ವಿಸ್ತಾರವಾಗಿ, ಹೆಣ್ಣಿಗೆ ಎಲ್ಲ ಜೀವನಾವಸ್ಥೆಗಳಲ್ಲಿಯೂ ಒಂದೊಂದು ಬಗೆಯಲ್ಲಿ ವಿಧಿ, ನಿಷೇಧಗಳನ್ನು ಹೇಳಿ ಅವಳ ಬದುಕನ್ನು ಇನ್ನಷ್ಟು ನರಕವಾಗಿಸಿತು. ಬಾಲ್ಯ, ಕೌಮಾರ್ಯ, ಪ್ರೌಢಾವಸ್ಥೆ, ಮುಪ್ಪು ಎಲ್ಲ ಹಂತಗಳಲ್ಲಿಯೂ ಪುರುಷಾಧೀನೆಯಾಗಿ, ಅವನ ರಕ್ಷಣೆಯ ನೆರಳಿನಲ್ಲಿ ಬದುಕುವ ಅನಿವಾರ್ಯತೆ ಸೃಷ್ಟಿಯಾಯಿತು. ಗಂಡ, ಮಕ್ಕಳೇ ಅವಳ ಜಗತ್ತು, ಅದರಾಚೆ ಅವಳಿಗೆ ಅಸ್ತಿತ್ವವೇ ಇಲ್ಲ. ಹೀಗಿರುವಾಗ ವಿಧವೆಯಾಗಿ ಗಂಡನ ಆಶ್ರಯ ತಪ್ಪಿದರೆ ಅವಳ ಬದುಕು ಮತ್ತಷ್ಟು ಕ್ರೂರವಾಯಿತು. ಮರುವಿವಾಹದ ಸಾಧ್ಯತೆಯೇ ಇಲ್ಲವಾಗಿ ಪರಾಧೀನೆಯಾಗಿ, ಪರಾವಲಂಬಿಯಾಗಿ, ಹೊರೆಯಾಗಿ ಬದುಕಬೇಕಾದ ದುರಾದೃಷ್ಟ ಅವಳ ಪಾಲಿನದಾಯಿತು. ಗಂಡನಿಲ್ಲದವಳನ್ನು ಹೊರೆಯಾಗಿ ಭಾವಿಸಿದಂತಹ ಸಮಾಜ ಅದರಿಂದ ತಪ್ಪಿಸಿಕೊಳ್ಳಲು 'ಸತಿಪದ್ಧತಿ'ಯೆಂಬ ಸುಲಭೋಪಾಯವನ್ನು ವೈಭವೀಕರಿಸಿ ಧಾರ್ಮಿಕ, ದೈವಿಕವೆಂಬ ನಂಬಿಕೆಯನ್ನು ಬಲಪಡಿಸಿತು.

ಸತಿ–ಪತಿ ಸಂಬಂಧ ಜನ್ಮ ಜನ್ಮಾಂತರದ್ದೆಂದು ಭಾಪಿಸಿದ್ದ ಪತಿಯ ಸಾಪಿನೊಂದಿಗೆ ತಾನೂ ಬಲಾತ್ಕಾರವಾಗಿ ಸಾವನ್ನು ಅಪ್ಪಿಕೊಳ್ಳುವ ವಿವಶತೆಗೆ ಅವಳನ್ನು ದೂಡಲಾಯಿತು. ಎಲ್ಲ ಬಗೆಯ ಪಾಪ, ಅನಿಷ್ಟಗಳಿಗೆ ಅವಳೇ ಕಾರಣಳೆಂಬ ಭಾವನೆ ಬಲವಾಗಿ ಬೇರೂರಿತ್ತು. ಅವಳ ಅಂತರಂಗದ ಅಳಲು ಆಸೆ, ಆಕಾಂಕ್ಷೆ, ಕನಸುಗಳಿಗೆ, ಹಂಬಲಗಳಿಗೆ ಸಮಾಜ ಕಿವುಡಾಗಿತ್ತು; ಕುರುಡಾಗಿತ್ತು. ಪುರುಷ ಸಮಾಜದ ಪಾಲಿಗೆ ಅವಳು ಕೇವಲ ಒಂದು ಭೋಗವಸ್ತು; ಸಂತಾನಯಂತ್ರ ಮಾತ್ರವಾಗಿದ್ದಳು. ಅವಳ ಕನಸುಗಳೊಂದಿಗೆ ಅವಳೂ ಗೋರಿಯಾಗಿದ್ದಳು.

ಇಂತಹ ಒಂದು ಚಾರಿತ್ರಿಕ, ಸಾಮಾಜಿಕ, ಸಾಂಸ್ಕೃತಿಕ ಹಿನ್ನೆಲೆಯೊಂದಿಗೆ ಕಾಣಿಸಿಕೊಂಡ ವಚನಯುಗದಲ್ಲಿ ದಿಢೀರನೆ ಕಾಣಿಸಿಕೊಂಡ ಪರಿವರ್ತನೆ ಅಥವಾ ಸ್ಥಿತ್ಯಂತರ ದಿಗ್ಭ್ರಮೆಗೆ ಒಳಗಾಗುವಂತೆ ಮಾಡಿತು. ಶತಶತಮಾನಗಳಿಂದಲೂ ಊಹಿಸಿಕೊಳ್ಳಲಾಗದ ವೈಚಾರಿಕ ನಿಲುವುಗಳು ಜಾತಿ, ವರ್ಣ, ಲಿಂಗ ವ್ಯವಸ್ಥೆಯಲ್ಲಿ ಕ್ರಾಂತಿಯ ಅಲೆಗಳನ್ನೆಬ್ಬಿಸಿದವು. ಲಿಂಗ ತಾರತಮ್ಯದಿಂದ ಹೆಣ್ಣು ಅನುಭವಿಸಿದ ಯಾತನೆಗೂ ಮಿಗಿಲಾಗಿ ತಳವರ್ಗದ ಜಾತಿ ಸಮುದಾಯಗಳು ಅನುಭವಿಸಿದ ನೋವು, ಯಾತನೆ, ಹಿಂಸೆ, ಅವಮಾನ, ಶೋಷಣೆ ಮತ್ತೂ ಭಯಂಕರವಾಗಿತ್ತು. ಆದರೆ ಉತ್ತಮಕುಲದಲ್ಲಿ ಹುಟ್ಟಿದ ಬಸವಣ್ಣನಂಥವರಿಗೆ ಜಾತಿ, ಕುಲ, ಲಿಂಗ ಯಾವುದೂ ಮಹತ್ವದ್ದೆನಿಸದೆ ಇಡೀ ಮನುಷ್ಯ ಸಮಾಜದ ಹಿತ, ಕಲ್ಯಾಣ ಮುಖ್ಯವೆನಿಸಿತು. ಜಾತಿ ತಾರತಮ್ಯ, ಲಿಂಗ ತಾರತಮ್ಯಗಳಿಲ್ಲದ, ಭದ್ರವಾದ ಆರ್ಥಿಕ ನೆಲೆಗಟ್ಟಿನ ಮೇಲೆ, ಎಲ್ಲ ಬಗೆಯ ಸ್ವಾತಂತ್ರ್ಯ ಸಮಾನತೆಗಳ ಮೇಲೆ ನಿಂತ ಆದರ್ಶ ಸುಖೀ ಸಮಾಜದ ಕನಸಿನೊಂದಿಗೆ ಬದಲಾವಣೆಯ ಮುಂಚೂಣಿಯಲ್ಲಿ ನಿಂತ ಹಲವು ಕಾಣ್ಕೆಗಳನ್ನು, ದರ್ಶನಗಳನ್ನು ಮೈಗೂಡಿಸಿಕೊಂಡಿದ್ದ ಬಸವಣ್ಣ ಒಬ್ಬ ವ್ಯಕ್ತಿಯಾಗಿರಲಿಲ್ಲ. ಅವನೊಂದು ಶಕ್ತಿಯಾಗಿದ್ದ; ದಾರ್ಶನಿಕ, ಸಮಾಜ ಸುಧಾರಕ, ಆರ್ಥಿಕ ಚಿಂತಕ; ರಾಜಕೀಯ ಮುತ್ಸದ್ದಿ; ಮತ ಪ್ರವರ್ತಕ; ಭಕ್ತಿ ಭಂಡಾರಿ; ಅನುಭಾವಿ– ಹೀಗೆಲ್ಲ ವ್ಯಕ್ತಿತ್ವಗಳ ಸಂಗಮವಾಗಿದ್ದ.

ಅಧ್ಯಾತ್ಮ, ಅನುಭಾವ ವಿಚಾರಗಳಿಗೂ ಮೊದಲು ಅಲಕ್ಷಿತ, ನಿರ್ಲಕ್ಷಿತ, ಶೋಷಿತ ಜನಸಮುದಾಯಗಳಿಗೆ ಸಾಮಾಜಿಕ ನ್ಯಾಯ ದೊರಕಿಸಿಕೊಡುವುದು, ರೂಢಿಗತ, ಸಾಂಪ್ರದಾಯಿಕ, ಸಂಕುಚಿತ ಅಭಿಪ್ರಾಯಗಳನ್ನು ತಿದ್ದುವುದು, ಲಿಂಗ, ಜಾತಿ ಸಂಬಂಧವಾದ ನಿಲವು, ನಂಬಿಕೆಗಳನ್ನು, ದೃಷ್ಟಿಕೋನ ಅಥವಾ ಮನೋಧರ್ಮಗಳನ್ನು ಬದಲಾಯಿಸುವುದು ಇವೇ ಅವನ ಕ್ರಾಂತಿಯ ಮಹತ್ತರ ಆಶಯಗಳಾಗಿದ್ದವು. ಈ ನಿಟ್ಟಿನಲ್ಲಿ ಅವನು ಹೆಣ್ಣಿನ ಬಗೆಗಿನ ನಿಲುವುಗಳನ್ನು ಉದಾತ್ತೀಕರಿಸುವ ಪ್ರಯತ್ನ

ಮಾಡಿದ. ಹೆಣ್ಣು ಜೈವಿಕವಾಗಿ ಪುರುಷನಿಂದ ಬೇರೆಯಾಗಿದ್ದಾಳೆಯೇ ಹೊರತು ಆತ್ಮದ ನೆಲೆಯಲ್ಲಿ, ಮನಸ್ಸಿನ ನೆಲೆಯಲ್ಲಿ, ಬೌದ್ಧಿಕ ಸಾಮರ್ಥ್ಯದಲ್ಲಿ ಪುರುಷನಿಗೆ ಸಮಾನಳು ಎನ್ನುವುದನ್ನು ಹಲವು ವಚನಗಳಲ್ಲಿ ಸ್ಪಷ್ಟವಾಗಿ ನುಡಿದ. ಅವನ ಸ್ತ್ರೀ ಸಮಾನತೆಯ ನಿಲುವನ್ನು ಮುಂದೆ ಬಂದ ವಚನಕಾರರೆಲ್ಲರೂ ಎತ್ತಿ ಹಿಡಿದರು; ಮಾರ್ದನಿಸಿದರು. 'ಮಾಯೆ' ಎಂಬ ಅಭಿದಾನದಿಂದ ಬಿಡಿಸಲು ಯತ್ನಿಸಿದರು.

**"ಮೊಲೆ ಮುಡಿ ಬಂದಡೆ ಹೆಣ್ಣೆಂಬರು**
**ಮೀಸೆ ಕಾಸೆ ಬಂದಡೆ ಗಂಡೆಂಬರು**
**ನಡುವೆ ಸುಳಿವ ಆತ್ಮನು**
**ಹೆಣ್ಣೂ ಅಲ್ಲ, ಗಂಡೂ ಅಲ್ಲ"**

ಎಂಬುದು ಜೇಡರ ದಾಸಿಮಯ್ಯನ ಮಾತಾದರೆ, ಅಂಬಿಗರ ಚೌಡಯ್ಯನೂ 'ಗಡ್ಡ ಮೀಸೆ ಬಂದಡೆ ಆ ಪಿಂಡವನು ಗಂಡೆಂಬರು । ಮೊಲೆಮುಡಿ ಬಂದಡೆ ಹೆಣ್ಣೆಂಬರು । ನಡುವೆ ಸುಳಿವ ಆತ್ಮ ಹೆಣ್ಣೂ ಅಲ್ಲ, ಗಂಡೂ ಅಲ್ಲ – ಎಂದು ದಾಸಿಮಯ್ಯನ ಯಥಾವತ್ತಾದ ಅಭಿಪ್ರಾಯವನ್ನೇ ಮುಂದಿಡುತ್ತಾನೆ. ಅಲ್ಲಮ 'ಹೆಣ್ಣು ಮಾಯೆಯಲ್ಲ ಮನದ ಮುಂದಣ ಆಸೆ ಮಾಯೆ' ಎಂದು ಹೆಣ್ಣು ಮಾಯೆ' ಎಂಬ ಆರೋಪದಿಂದ ಬಿಡಿಸುತ್ತಾನೆ. ಸಿದ್ಧರಾಮನಾದರೋ ಹೆಣ್ಣನ್ನು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ'ನೆಂದು ದೈವದೊಂದಿಗೆ ಸಮೀಕರಿಸುತ್ತಾನೆ.

ಸಾಮಾಜಿಕ ಸಮಾನತೆಯನ್ನು ನೆಲೆಗೊಳಿಸುವಲ್ಲಿ ಪುರುಷರೇ ಇಷ್ಟೊಂದು ಉದಾರವಾಗಿ ಹೆಣ್ಣಿನ ಪರವಾಗಿ ಮಾತನಾಡಿದಾಗ, ಹೆಣ್ಣು ಮಕ್ಕಳೂ ಹಿಂದು ಬೀಳಲಿಲ್ಲ. ಪುರುಷನೊಂದಿಗಿನ ಆತ್ಮಿಕ ಸಮಾನತೆಯ ಬಗ್ಗೆ ಅಕ್ಕಮ್ಮ ಗೊಗ್ಗವ್ವೆ, ಸತ್ಯಕ್ಕ, ನೀಲಮ್ಮ, ಆಯ್ದಕ್ಕಿ ಲಕ್ಕಮ್ಮ, ಅಕ್ಕಮಹಾದೇವಿ ಮೊದಲಾಗಿ ಅನೇಕ ಮಂದಿ ಶರಣೆಯರು, ದನಿ ಸೇರಿಸಿದರು. ಮಹಿಳೆಯರಾಗಿ ಅನುಭವಿಸಿದ ಯಾತನೆಯ ಪರಂಪರೆಯ ಅರಿವಿತ್ತು. ಆದರೆ ತಾವಾಗಿ ಅಲ್ಲಿಯವರೆವಿಗೂ ಮೂಕಯಾತನೆಯನ್ನು ಅನುಭವಿಸಿಕೊಂಡು ಬಂದರೇ ಹೊರತು ಪುರುಷ ಸಮಾಜದ ವಿರುದ್ಧ ಪ್ರತಿಭಟಿಸಲಿಲ್ಲ. ತಮಗಾಗಿ ಸಾಮಾಜಿಕ ಸಮಾನತೆಯನ್ನು ಬಯಸಿ ಹೋರಾಟಕ್ಕೆ ಇಳಿಯಲಿಲ್ಲ. ಆದರೆ ಅಂತರ್ಗತ ಬಯಕೆಗೆ ಬಸವಣ್ಣಾದಿ ಶರಣರ ಪ್ರೇರಣೆಯಿಂದ, ಬಾಯಿ ಬಂತು. ಅವರ ಮಾತುಗಳನ್ನೇ ತಮ್ಮ ರೀತಿಯಲ್ಲಿ ಅಭಿವ್ಯಕ್ತಿಸಿದರು. ಗೊಗ್ಗವ್ವೆ ಎಂಬ ಶರಣೆ.

**ಮೊಲೆ ಮುಡಿ ಬಂದಡೆ ಹೆಣ್ಣೆಂಬರು**
**ಮೀಸೆ ಕಾಸೆ ಬಂದಡೆ ಗಂಡೆಂಬರು**
**ಈ ಉಭಯದ ಜ್ಞಾನ ಹೆಣ್ಣೋ ಗಂಡೋ?–**

ಎಂದು ಪ್ರಶ್ನಿಸುವುದರ ಮೂಲಕ, ಆತ್ಮದ ಜೊತೆಗೆ ಜ್ಞಾನವನ್ನೂ ಸೇರಿಸಿ, ಲಿಂಗಭೇದವಿಲ್ಲವೆಂಬುದನ್ನು ಸ್ಥಾಪಿಸುತ್ತಾಳೆ. ಆಯ್ದಕ್ಕಿ ಲಕ್ಕಮ್ಮನೂ ಗೊಗ್ಗವ್ವೆಯಂತೆ 'ಅರಿಪಿಂಗೆ' ಲಿಂಗಭೇದ ಸಲ್ಲದೆನ್ನುತ್ತಾಳೆ. ಸತ್ಯಕ್ಕನ ದೃಷ್ಟಿಯಲ್ಲಿ ಹೆಣ್ಣು ಗಂಡು ಎಂಬುದು ಜಗತ್ತಿನ ರೀತಿಯೇ ಹೊರತು, ಬಲ್ಲವರ ನೀತಿಯಲ್ಲ. ಅಕ್ಕಮಹಾದೇವಿ ಈ ಎಲ್ಲ ಶರಣೆಯರಿಗಿಂತ ಭಿನ್ನವಾದರೂ, ಹೆಣ್ಣನ್ನು ಅವಳೂ ಮಾಯೆಯೆಂದು ಒಪ್ಪುವುದಿಲ್ಲ. ಗಂಡಿಗೆ ಹೆಣ್ಣು ಮಾಯೆಯಾದರೆ ಹೆಣ್ಣಿಗೆ ಗಂಡು ಮಾಯೆ' ಎಂದು ಸವಾಲಿನಂತೆ ಉತ್ತರಿಸಿದಳು.

ಸ್ತ್ರೀಯರ ಬಗ್ಗೆ ಶರಣೆಯರು ದಿಟ್ಟತನದಿಂದ ಮಾತನಾಡಿದರೂ, ಆಂತರಂಗಿಕವಾಗಿ ಸಾಂಪ್ರದಾಯಿಕ ನಿಲುವುಗಳನ್ನೇ ಒಪ್ಪಿಕೊಂಡರು. ಎಷ್ಟೇ ಸಮಾನತೆಯ ಬಗ್ಗೆ ನಂಬಿಕೆಯಿರಿಸಿಕೊಂಡರೂ ಆ ಸಮಾನತೆಯನ್ನು ಸಾಧ್ಯವಾಗಿಸಿಕೊಂಡದ್ದು ದಾಂಪತ್ಯದ ನೆಲೆಯಲ್ಲಿ, ಕುಟುಂಬ ವ್ಯವಸ್ಥೆಯ ಚೌಕಟ್ಟಿನಲ್ಲಿ; ಅಧ್ಯಾತ್ಮಿಕ ಸಾಧನೆಯ ಹಾದಿಯಲ್ಲಿ; ಕಾಯಕದ ನಿರ್ವಹಣೆಯಲ್ಲಿ ಶರಣೆಯರೆಲ್ಲರೂ ತಮ್ಮ ಕಾಲದ ಸ್ತ್ರೀಮೌಲ್ಯಗಳಲ್ಲಿ ನಂಬಿಕೆಯನ್ನು ಇರಿಸಿಕೊಂಡಿದ್ದರು. ಪಾತಿವ್ರತ್ಯ, ದಾಂಪತ್ಯದಲ್ಲಿ ಸಾಮರಸ್ಯಗಳನ್ನು ಸಾಧ್ಯವಾಗಿಸಿಕೊಳ್ಳಲು 'ಶರಣಸತಿ-ಲಿಂಗಪತಿ' ಎನ್ನುವ ಅಧ್ಯಾತ್ಮಿಕ ಪರಿಕಲ್ಪನೆ 'ಸತಿಪತಿಗಳೊಂದಾದ ಭಕ್ತಿ ಪ್ರಿಯವಪ್ಪುದು ಶಿವನಿಗೆ' - ಎನ್ನುವ ಭಾವದೊಂದಿಗೆ ಆಚರಿಸುವ ಭಕ್ತಿ, "ಗಂಡ ಹೆಂಡಿರ ಮನಸ್ಸು ಒಂದಾಗಿದ್ದರೆ । ದೇವರ ಮುಂದೆ ನಂದಾದೀವಿಗೆಯ ಮುಡಿಸಿದ ಹಾಗೆ' ಎಂಬ 'ನಂಬಿಕೆ'ಗಳು ಮುಖ್ಯವಾದವು.

'ಪಾತಿವ್ರತ್ಯ' ವೆಂಬುದು ಶಿವನಿಷ್ಠೆ, ಆಚಾರನಿಷ್ಠೆ ಸತ್ಯಶುದ್ಧ ಶೀಲ ಚಾರಿತ್ರ್ಯಗಳ ಭಾಗವಾಗಿತ್ತು. ಭಕ್ತರಾದ ಶರಣರೆಲ್ಲರೂ ತಾವು ಅಧ್ಯಾತ್ಮ, ಅನುಭಾವದ ನೆಲೆಯಲ್ಲಿ ತಮ್ಮನ್ನು ಸತಿಯರಾಗಿ ಭಾವಿಸಿಕೊಂಡು 'ಪಾತಿವ್ರತ್ಯ'ದ ಪರಿಕಲ್ಪನೆಯನ್ನು ಎತ್ತಿ ಹಿಡಿದರು. ಬಸವಣ್ಣನಂತಹ "ಪರಮ ಪತಿವ್ರತೆಗೆ ಗಂಡನೊಬ್ಬ" ಪರಪುರುಷರ ಮುಖವ ನೋಡದಂತೆ ಮಾಡಾ, ಬಳಿಕ ನೀನೆ ಹಗೆಯಿರಿಸಿದಂತೆ ಇರಿಸಾ', 'ನಂಬಿದ ಹೆಂಡತಿಗೆ ಗಂಡನೊಬ್ಬನೆ ಕಾಣಿರೊ; ನಂಬಬಲ್ಲ ಭಕ್ತಂಗೆ ದೇವನೊಬ್ಬನೆ ಕಾಣಿರೋ' 'ಆನು ಮುತ್ತೈದೆ ಆನು ನಿಟ್ಟೈದೆ ಕೂಡಲಸಂಗಮದೇವನಂತಪ್ಪ ಎನಗೊಬ್ಬ ಗಂಡನುಂಟು" - ಎಂದೆಲ್ಲಾ ಹೇಳಿ ಶಿವನಿಷ್ಠೆಯ ಸಂದರ್ಭದಿಂದ ಪಾತಿವ್ರತ್ಯವನ್ನು ಪ್ರತಿಪಾದಿಸಿದರೂ ಶರಣೆಯರು ಇಹ-ಪರ ಎರಡೂ ನೆಲೆಗಳಲ್ಲಿ ಪಾತಿವ್ರತ್ಯದ ಆದರ್ಶವನ್ನು ಎತ್ತಿಹಿಡಿದರು. ಏಕದೇವ ನಿಷ್ಠೆಯಂತೆ ಧರ್ಮಸಮ್ಮತ ದಾಂಪತ್ಯ ಬದುಕಿಗೆ ಒಳಗಾಗಿಸಿಕೊಂಡ ಯಾವ ಶರಣೆಯೂ ವ್ರತ, ಆಚಾರ, ಶೀಲ ಚಾರಿತ್ರ್ಯ ಶುದ್ಧಿಯ ಭಾಗವಾಗಿ ಪರ ಪುರುಷನಿಗೆ ಆಸೆ ಪಡುವಂತಿಲ್ಲ. ಮೊಟ್ಟ ಮೊದಲ ಜಾರಿಗೆ ಬಹುದೊಡ್ಡ ಸಂಖ್ಯೆಯಲ್ಲಿ ಬಸವಣ್ಣನ

ಅತ್ಯಂತ ಪ್ರಗತಿಪರ ವಿಚಾರಗಳಿಗೆ ಸ್ಪಂದಿಸಿ, ಅಧ್ಯಾತ್ಮದ ಪಾತಳಿಯಲ್ಲಿ ಸಮಾನತೆಯ ಸಂಭ್ರಮವನ್ನು ಅನುಭವಿಸಿದರು. ಶರಣರ ವಿಚಾರಗಳ ಪ್ರತಿಧ್ವನಿಯಾಗಿಯೇ ಅನೇಕ ಶರಣೆಯರ ವಿಚಾರಗಳೂ ಇದ್ದವು. ಅತ್ಯಂತ ತಳವರ್ಗದ ಮಹಿಳೆಯರೂ ಮೇಲುವರ್ಗದ ಮಹಿಳೆಯರೂ ಲಿಂಗದೀಕ್ಷೆಯ ಮೂಲಕ ಶರಣ ಸಮಾಜದ ಭಾಗವಾಗಿ ಶರಣಧರ್ಮದ ಮೌಲ್ಯಗಳು, ಆದರ್ಶಗಳು ಸಿದ್ಧಾಂತಗಳು ಎಲ್ಲವನ್ನೂ ರೂಢಿಸಿಕೊಂಡರು. ಅವರು ಅಭಿವ್ಯಕ್ತಿಸಿದ ಹಲವಾರು ವಿಚಾರಗಳು, ಸಮಾನತೆ, ಸ್ವಾತಂತ್ರ್ಯ, ಶೀಲ, ಆಚಾರ, ವ್ರತ, ನೇಮ, ನಿಷ್ಠೆ, ಜಾತ್ಯತೀತತೆ, ಕಾಯಕ, ಅಂತರಂಗ, ಬಹಿರಂಗ ಶುದ್ಧಿ, ಡಾಂಭಿಕತೆ ಇತ್ಯಾದಿಗಳು ಭವಿ, ಭಕ್ತ, ಭಕ್ತಿ ಸಂಬಂಧವಾಗಿಯೇ ಇದ್ದರೂ ಅವು ಸಾಮಾನ್ಯರ ಬದುಕಿನಲ್ಲಿಯೂ ಅಳವಡಿಸಿಕೊಳ್ಳಬಹುದಾದ ಮೌಲ್ಯಗಳೂ ಸಂಹಿತೆಗಳೂ ಆಗಿವೆ.

ಸ್ತ್ರೀ ಸಮುದಾಯದಲ್ಲಿ ಮಹತ್ತರ ಬದಲಾವಣೆ ತಲೆದೋರಿತು. ಅಕ್ಕನಾಗಮ್ಮನಂತಹವರು ಶಾಲೆ ತೆರೆದು ಅಕ್ಷರದ ಅರಿವನ್ನು ಮೂಡಿಸಿದರು. ಅಧ್ಯಾತ್ಮ ಭಕ್ತಿ ಸಾಧನೆಯ ವಲಯದೊಳಗೇ ಆದರೂ ಆತ್ಮಗೌರವ ಆತ್ಮ ಪ್ರತಿಷ್ಠೆಯೊಂದಿಗೆ ಆರ್ಥಿಕ, ಬೌದ್ಧಿಕ ಸಬಲೀಕರಣದೊಂದಿಗೆ ಅನುಭವ ಮಂಟಪದಂತಹ ವೈಚಾರಿಕ ವೇದಿಕೆಯಲ್ಲಿ ಅಧ್ಯಾತ್ಮ, ಅನುಭಾವಗಳ ಕುರಿತು ಪುರುಷರೊಂದಿಗೆ ಮುಕ್ತ ಚರ್ಚೆಗಳಲ್ಲಿ ಭಾಗವಹಿಸುತ್ತಾ ಸ್ತ್ರೀತನದ ಅನನ್ಯತೆಯನ್ನು ಸ್ಥಾಪಿಸುತ್ತಾ ಬದುಕಿದರು.

ಶರಣೆಯರ ಮುಕ್ತ ವಿಚಾರಗಳು ಮಾತ್ರವಲ್ಲ, ಅವರ ಶೀಲ, ಚಾರಿತ್ರ್ಯಶುದ್ಧಿಯಿಂದ, ಕೌಟುಂಬಿಕ ಸಾಮರಸ್ಯದಿಂದ ಗಂಡು–ಹೆಣ್ಣೆಂಬ ಅಹಂಕಾರ ದಾರ್ಷ್ಟ್ಯಗಳಿಂದ ಕಲುಷಿತವಾಗದ ಅನ್ಯೋನ್ಯತೆಯಿಂದ ಬಾಳಿದ ಬದುಕುಗಳೇ ಇಂದಿನ ಸ್ತ್ರೀ ಸಮಾಜಕ್ಕೆ ಮಾದರಿಯಾಗಿದೆ. ಹೆಣ್ಣು ಜನ್ಮದ ನೋವಿನ ಅರಿವಿದೆ. ಹೆಣ್ಣುತನವನ್ನು ಮೀರಬೇಕೆಂಬ ಅದಮ್ಯವಾದ ಅಂತರ್ಗತವಾದ ತುಡಿತವಿದೆ. ೧೨ನೇ ಶತಮಾನದ ಸ್ತ್ರೀಹೋರಾಟ, ಸ್ವಾತಂತ್ರ್ಯ ಚಳುವಳಿ ಇಂದಿನಂತಲ್ಲ. ಸಾಮಾಜಿಕ ನೆಲೆಯಲ್ಲಿ ಅವರು ಸ್ವಾತಂತ್ರ್ಯಕ್ಕಾಗಿ ಪ್ರತಿಭಟಿಸಬೇಕೆಂಬ ಕಲ್ಪನೆಯಾಗಲೀ ಅವರಿಗಿದ್ದಂತೆ ಇಲ್ಲ. ಅವರು ಬಯಸಿದ್ದು ಅಧ್ಯಾತ್ಮಿಕ ನೆಲೆಯಲ್ಲಿನ ಸ್ವಾತಂತ್ರ್ಯವನ್ನು. ಹೆಣ್ಣಾಗಿ ಹುಟ್ಟಿದವಳು ಗಂಡ, ಮಕ್ಕಳು ಮನೆ ಇವುಗಳ ಬಗ್ಗೆ ನಿಷ್ಠೆ ತೋರಬೇಕಲ್ಲದೆ ಅಧ್ಯಾತ್ಮ ಸಾಧನೆ, ಮೋಕ್ಷ ಇತ್ಯಾದಿಗಳ ಬಗ್ಗೆ ಯೋಚಿಸಲೂ ಅರ್ಹಳಲ್ಲ ಎಂಬ ಭಾವವೇ ಪ್ರಚಲಿತವಾಗಿದ್ದ ಸಂದರ್ಭದಲ್ಲಿ ಶಿವಯೋಗಿಣಿ ಲಿಂಗಮ್ಮ ಮಹಿಳೆಯರಿಗೆ ಮೋಕ್ಷ ಸಾಧನೆಗೆ ಅವಕಾಶ ಬೇಕೆಂದಳು. ಶಿವಪ್ರಿಯೆ ಎಂಬವಳು ಆಸ್ತಿ ಹಕ್ಕಿಗಾಗಿ ದನಿ ಎತ್ತಿದಳು. ಇನ್ನು ಅಕ್ಕ ಮಹಾದೇವಿ, ಮುಕ್ತಾಯಕ್ಕ, ಅಕ್ಕ ನಾಗಮ್ಮ, ನೀಲಾಂಬಿಕೆ, ಗಂಗಾಂಬಿಕೆ ಮೊದಲಾಗಿ ಮೇಲುವರ್ಗದ

ಹೆಂಗಸರೇ ಅಲ್ಲದೆ ಕೆಳಜಾತಿ ವರ್ಗಗಳಿಂದ ಬಂದ ರೇಮ್ಮವ್ವೆ, ಕದಿರವ್ವೆ, ಗೊಗ್ಗವ್ವೆ, ಅಕ್ಕಮ್ಮ, ಆಯ್ದಕ್ಕಿ ಲಕ್ಕಮ್ಮ, ಗಣೇಶ ಮಸಣಯ್ಯಗಳ ಪುಣ್ಯಸ್ತ್ರೀ, ಕಾಳವ್ವೆ, ಸೂಳೆ ಸಂಕವ್ವೆ ಮೊದಲಾಗಿ ಅಪಾರ ಸಂಖ್ಯೆಯ ಮಹಿಳೆಯರು ತಮ್ಮ ತಮ್ಮ ಅರಿವು, ಅನುಭವಗಳಿಗೆ ಅನುಗುಣವಾಗಿ ಮತ್ತು ತಮ್ಮ ಸೀಮಿತತೆಯಲ್ಲಿ ಗುರು, ಲಿಂಗ, ಜಂಗಮ, ಆಚಾರ, ಅರಿವು, ವ್ರತ, ನೇಮ, ಭಕ್ತಿ, ಷಟ್ಸ್ಥಲ, ಇಷ್ಟಲಿಂಗ ಇವುಗಳನ್ನು ಕುರಿತು ವಚನಗಳನ್ನು ರಚಿಸಿದರು. ಈ ವಿಷಯಗಳ ಹೊರತಾಗಿ ಅಥವಾ ಇವುಗಳ ಆಚೆಗೆ ಸಾಮಾಜಿಕ ಎಚ್ಚರವನ್ನು ಮೂಡಿಸುವ, ಸುಧಾರಣೆಯನ್ನು ಸೂಚಿಸುವ ಅಂಶಗಳನ್ನು ಒಳಗೊಂಡ ವಚನಗಳು ತೀರಾ ಅಪರೂಪ. ಆದರೆ ಮುಕ್ತಾಯಕ್ಕ, ಅಕ್ಕಮ್ಮ, ಸತ್ಯಕ್ಕ, ಕಾಳವ್ವೆ ಮುಂತಾದವರು ಅಲ್ಲಲ್ಲಿ ಹೇಳಿರುವ ಕೆಲವು ಮಾತುಗಳು ಎಲ್ಲ ಕಾಲಕ್ಕೂ ಪ್ರಸ್ತುತವೆನಿಸುತ್ತವೆ. 'ಸುಮ್ಮನೇಕೆ ದಿನಗಳೆವಿರಿ; ಸುಮ್ಮನೇಕೆ ಹೊತ್ತುಗಳೆವಿರಿ ಸ್ವಾಮಿಗಳಿರಾ' 'ಅರಿವನಣಲೊಳಗಿಕ್ಕಿ ಅಗಿವುತ್ತಿದೆ ಮರ್ತ್ಯಲೋಕವೆಲ್ಲವು" (ಮುಕ್ತಾಯಕ್ಕ) 'ನುಡಿಯಲು ಬಾರದು ಕೆಟ್ಟ ನುಡಿಗಳ। ನಡೆಯಲು ಬಾರದು ಕೆಟ್ಟ ನಡೆಗಳ' 'ಅರಿವೇ ಗುರು' 'ಲಂಚ ವಂಚನಕ್ಕೆ ಕೈಯಾಗದ ಭಾಷೆ। ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಿದ್ದಡೆ। ಕೈಮುಟ್ಟಿ ಎತ್ತಿದೆನಾದಡೆ ಅಯ್ಯಾ ನಿಮ್ಮಾಣೆ' 'ಪರಧನ ಪರಸ್ತ್ರೀ ಪರದೈವಂಗಳಿಗೆರಗದಿಪ್ಪುದೇ ನೇಮ' (ಸತ್ಯಕ್ಕ) 'ಸತ್ಯಶುದ್ಧವಿಲ್ಲದುದು ಕಾಯಕವಲ್ಲ' ಎಂಬ ನುಡಿಗಳು, ಜಾತಿ ಕುರಿತಾಗಿ, "ಕುರಿ ಕೋಳಿ ಕಿರಿಮೀನು। ತಿಂಬವರಿಗೆಲ್ಲ ಕುಲಜ ಕುಲಜ ಎಂಬರು। ಶಿವಗೆ ಪಂಚಾಮೃತ ಕರೆವ ಪಶುವ ತಿಂಬ ಮಾದಿಗ ಕೀಳು ಜಾತಿ ಎಂಬರು। ಅವರೆಂತು ಕೀಳು ಜಾತಿಯಾದರು?' – ಎಂದು ಎತ್ತಿದ ಪ್ರಶ್ನೆಗಳು ಇವತ್ತಿಗೂ ಪ್ರಶ್ನೆಗಳಾಗಿವೆ. ಚಾರಿತ್ರ್ಯಶುದ್ಧಿ, ಕಾಯಕ ನಿಷ್ಠೆಯ ಜೊತೆಗೆ ಶರಣೆಯರು ನಡೆಸಿದ ಮತ್ತೊಂದು ಮಹತ್ವದ ಚಿಂತನೆ 'ಕಾಯ' ಮತ್ತು 'ಲೋಕ ಸ್ವಭಾವ' ಅಕ್ಕಮಹಾದೇವಿಯ ಅಧ್ಯಾತ್ಮಿಕ ಪಯಣ ಸಂಘರ್ಷಗಳಿಂದ ಸಂಕೀರ್ಣವಾದುದು. ಲೌಕಿಕದ ವಾಸ್ತವಗಳ ಬಿರುಗಾಳಿಗೆ ಒಡ್ಡಿಕೊಳ್ಳುತ್ತಾ, ಹೋರಾಡುತ್ತಾ, ನಿರಾಕರಿಸುತ್ತ, ಅಲೌಕಿಕತೆಯ ಅನುಭಾವ ಸುಖಗಳನ್ನು ಅರಸುತ್ತಾ ಹೊರಟವಳು. ಸಮಾಜ, ಸಮುದಾಯಗಳ ಕಾಳಜಿಗಳಿಗಿಂತ ವೈಯಕ್ತಿಕ ಯಾತನೆಯ ಸಂಕಥನವೇ ಅವಳಿಗೆ ಮುಖ್ಯವಾಯಿತು. ತಾನು 'ಕಾಯ' ಮೋಹವನ್ನು ತೊರೆದರೂ ತನ್ನೊಂದು ವಚನದಲ್ಲಿ 'ಕಾಯ'ದ ಸ್ವಸ್ಥತೆಯನ್ನು ಕಾಪಾಡಿಕೊಳ್ಳಲು ಉಪದೇಶಿಸುತ್ತಾಳೆ. "ಆಹಾರವ ಕಿರಿದು ಮಾಡಿರಣ್ಣಾ ಆಹಾರವ ಕಿರಿದು ಮಾಡಿ ಆಹಾರದಿಂದ ವ್ಯಾಧಿ ಹಬ್ಬಿ ಬಲಿಯುವುದಯ್ಯಾ ಆಹಾರದಿಂದ ನಿದ್ರೆ, ನಿದ್ರೆಯಿಂ ತಾಮಸ, ಅಜ್ಞಾನ ಮೈ ಮರಹು

ಅಜ್ಞಾನದಿಂ ಕಾಮ ವಿಕಾರ ಹೆಚ್ಚಿ
ಕಾಯ ವಿಕಾರ, ಮನೋವಿಕಾರ, ಇಂದ್ರಿಯ ವಿಕಾರ

**ಭಾವವಿಕಾರ, ವಾಯು ವಿಕಾರವನುಂಟು ಮಾಡಿ**
**ಸೃಷ್ಟಿಸಿ ತಹುದಾದ ಕಾರಣ ಕಾಯದ ಅತಿಪೋಷಣೆ ಬೇಡ**
**ಅತಿಪೋಷಣೆ ಮೃತ್ಯುವೆಂದುದು**
**ಜಪ ತಪ ತ್ಯಾಗ ಧಾರಣ ಪೂಜೆಗೆ ಸೂಕ್ಷ್ಮದಿಂ ತನುಮಾತ್ರವಿದ್ದರೆ ಸಾಲದೆ?**
**ತನುವ ಪೋಷಿಸುವ ಆಸೆ ಯತಿತ್ವಕ್ಕೆ ವಿಘ್ನವೆಂದುದು**
**ತನುಪೋಷಣೆಯಿಂದ ತಾಮಸ ಹೆಚ್ಚಿ ಅಜ್ಞಾನದಿಂ ವಿರಕ್ತಿಹಾನಿ**
**ಅರಿವು ನಷ್ಟ ಪರವು ದೂರ, ನಿರಕೆ ನಿಲವಿಲ್ಲದ ಕಾರಣ**
**ಚೆನ್ನಮಲ್ಲಿಕಾರ್ಜುನನೊಲಿಸ ಬಂದ ಕಾಯವ**

ಕೆಡಿಸದೆ ಉಳಿಸಿಕೊಳ್ಳಿರೋ - ಎಂದು ಭಕ್ತಿ ಸಾಧನೆಯ ಹಂತದಲ್ಲಿ ಮಿತಿಮೀರದ ಆಹಾರ ಸೇವನೆಯಿಂದ ಉಂಟಾಗಬಹುದಾದ ಅನಾಹುತಗಳನ್ನು ವಿವರಿಸಿ ಹೇಳಿದ್ದಾಳಾದರೂ, ಮಿತಾಹಾರ ಆರೋಗ್ಯಕ್ಕೆ ಒಳ್ಳೆಯದೆಂದು ವೈಜ್ಞಾನಿಕವಾಗಿಯೂ ಪುರಸ್ಕರಿಸಲಾಗಿದೆ. ಕಾಯ ಸ್ವಸ್ಥವಿದ್ದಲ್ಲಿ ಮನಸ್ಸು, ಬುದ್ಧಿಗಳೂ ಸ್ವಸ್ಥವಾಗಿರುತ್ತವೆಂಬುದು ಸಾರ್ವತ್ರಿಕೆ, ಸಾರ್ವಕಾಲಿಕ ನಂಬಿಕೆಯಾಗಿದೆ.

'ಬೆಟ್ಟದ ಮೇಲೊಂದು ಮನೆಯ ಮಾಡಿ । ಮೃಗಗಳಿಗಂಜಿದೊಡೆಂತಯ್ಯಾ..... ಎಂದು ಮೊದಲಾಗುವ ವಚನವೂ ಉಪದೇಶಾತ್ಮಕ ನೆಲೆಯಲ್ಲಿದ್ದು, ಲೋಕದಲ್ಲಿ ಹುಟ್ಟಿದ ಮೇಲೆ ಸ್ತುತಿ ನಿಂದೆಗಳು ಅನಿವಾರ್ಯ ಬದುಕಿನ ಭಾಗವಾಗಿರುವುದಿಂದ ಸಮಾಧಾನ ಚಿತ್ತರಾಗಿರಬೇಕೆಂದು ಸೂಚಿಸುತ್ತಾಳೆ. ಅಧ್ಯಾತ್ಮಿಕ ಪರಿಧಿಯೊಳಗೇ ನಡೆದ ಶರಣೆಯರ ವೈಚಾರಿಕ ಚಿಂತನೆಗಳು ಇವತ್ತಿನ ಸಂದರ್ಭದಲ್ಲಿ ನಮಗೆ ಎಷ್ಟು ಪ್ರಸ್ತುತ ಎನ್ನುವುದು ಗಂಭೀರವಾಗಿ ಆಲೋಚಿಸಬೇಕಾಗಿದೆ. ಸುಮಾರು ಒಂಬತ್ತು ಶತಮಾನಗಳ ಹಿಂದೆಯೇ ಶರಣೆಯರು, ಬಸವಣ್ಣನವರು ತಮಗೆ ಸಾಧ್ಯವಾಗಿರಿಸಿಕೊಟ್ಟ ಸಾಮಾಜಿಕ ಭದ್ರತೆ, ಆಧ್ಯಾತ್ಮಿಕ ಸ್ವಾತಂತ್ರ್ಯ, ವೈಚಾರಿಕ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ, ಆರ್ಥಿಕ ಸ್ವಾತಂತ್ರ್ಯಗಳಿಂದಾಗಿ ತಮ್ಮನ್ನು ಎಲ್ಲ ರೀತಿಯಿಂದಲೂ ಸಬಲೀಕರಣಗೊಳಿಸಿಕೊಂಡರು. ಪುರುಷರಂತೆ ತಾವೂ ಒಂದಲ್ಲ ಒಂದು ಕಾಯಕದಲ್ಲಿ ನಿರತರಾಗಿ ವ್ಯಕ್ತಿ ಗೌರವಾದರಗಳನ್ನು ಗಳಿಸಿಕೊಳ್ಳಬಹುದೆಂಬ ನಂಬಿಕೆಯಿಂದಲೇ ಇಂದೂ ಸಬಲೀಕರಣ ಪ್ರಕ್ರಿಯೆಗೆ ತುಡಿಯುತ್ತಿರುವವರಿಗೆ ಮಾದರಿಗಳಾಗಬಲ್ಲರು.

ಇಂದು ಸ್ತ್ರೀ ಪುರುಷರೆಲ್ಲರೂ ಸಮಕಾಲೀನ ಸಮಸ್ಯೆಗಳಿಂದಾಗಿ ವಿಕ್ಷುಬ್ಧ ಮನಸ್ಥಿತಿಯಲ್ಲಿದ್ದಾರೆ. ಅಹಂಕಾರ, ಅಧಿಕಾರ, ಆತ್ಮ ಪ್ರತಿಷ್ಠೆಗಳು, ಆಸೆ ಆಮಿಷಗಳು, ಕ್ರೌರ್ಯ ಹಿಂಸೆಗಳು ಶಾಂತಿ, ಸಮಾಧಾನಗಳನ್ನು ಕದಡಿವೆ. ಮಾನವೀಯ ಮೌಲ್ಯಗಳು, ನೈತಿಕ ಮೌಲ್ಯಗಳು ಧೂಳೀಪಟವಾಗಿವೆ. ಸ್ವಾತಂತ್ರ್ಯ, ಸಮಾನತೆ, ಅಧಿಕಾರ, ಹಕ್ಕುಗಳಿಗಾಗಿ

ಮಹಿಳೆಯರು ನಡೆಸಿದ ಹೋರಾಟದಿಂದ, ರಾಜಕೀಯ, ಸಾಮಾಜಿಕ ಸ್ವಾತಂತ್ರ್ಯ ಸಿಕ್ಕಿದೆಯೆಂದುಕೊಂಡರೂ, ಹಿಂದೆ ನಡೆಯುತ್ತಿದ್ದ ರೀತಿಯಲ್ಲಿಯೇ ಲಿಂಗತಾರತಮ್ಯದಿಂದಾಗಿ ಮಹಿಳೆಯರ ಶೋಷಣೆ, ಅತ್ಯಾಚಾರಗಳು ನಿರಂತರವಾಗಿ ನಡೆಯುತ್ತಿದೆ. ಸ್ತ್ರೀ ಪುರುಷರಲ್ಲಿನ ಅಹಂನಿಂದಾಗಿ, ವೈಚಾರಿಕ ಸಂಘರ್ಷಗಳಿಂದಾಗಿ ಕುಟುಂಬ ವ್ಯವಸ್ಥೆಯಲ್ಲಿ ವಿಘಟನೆ ತಲೆದೋರುತ್ತಿದೆ. ದಾಂಪತ್ಯದಲ್ಲಿನ ಸಾಮರಸ್ಯ ಬಿಗಡಾಯಿಸುತ್ತಿದೆ. ಪುರುಷನ ಲೈಂಗಿಕ ಹಸಿವು, ಕಾಮ ವಿಕಾರಗಳಿಂದಾಗಿ ಹೆಣ್ಣಿಗೆ ಭದ್ರತೆಯೇ ಇಲ್ಲದಂತಾಗಿದೆ. ಇಂತಹ ಸನ್ನಿವೇಶದಲ್ಲಿ ಶರಣೆಯರು ತಮ್ಮ ಬದುಕಿನ ಮೂಲಕ ನಿದರ್ಶನವಾಗಿ ತೋರಿಸಿಕೊಟ್ಟ ಸ್ತ್ರೀಪುರುಷರ ನಡುವಿನ ಸಾಮರಸ್ಯ, ಶುದ್ಧ ಚಾರಿತ್ರ್ಯ, ಕಾಯಕ ನಿಷ್ಠೆ, ಆಸೆ ಆಮಿಷಗಳಿಂದ ಮುಕ್ತಿ, ದಿಟ್ಟ ನಿಲುವು, ಸ್ತ್ರೀ ಸಮುದಾಯದ ಬಗೆಗೆ ತಳೆದ ಮುಕ್ತ ಉದಾತ್ತ ನಿಲುವುಗಳು ಎಂದೆಂದಿಗೂ ಪ್ರಸ್ತುತವೆನಿಸುವುದರಲ್ಲಿ ಎರಡು ಮಾತಿಲ್ಲ.

ಸ್ತ್ರೀ ಪುರುಷ ಸಂಬಂಧವಾಗಿ ನುಡಿದ ವಿಚಾರಗಳಷ್ಟಕ್ಕೇ ನಿಲ್ಲದೆ, ವ್ರತ, ನೇಮ, ಆಚಾರ, ತನು ಮನ ಶೀಲ ಸಂಬಂಧವಾಗಿ ಅವರು ನುಡಿವ ಮಾತುಗಳೂ ತಳೆದ ನಿಲುವುಗಳೂ, ಪ್ರಸ್ತುತ ಪರಿಸರದಲ್ಲಿ ಬಹಳ ಮುಖ್ಯವೆನಿಸುತ್ತವೆ. ಎಲ್ಲೆಲ್ಲೂ ಭ್ರಷ್ಟತೆ ತಾಂಡವವಾಡುತ್ತಿದೆ. ರಾಜಕೀಯ, ಸಾಮಾಜಿಕ ವಲಯಗಳಲ್ಲಷ್ಟೇ ಅಲ್ಲದೆ ಅಧ್ಯಾತ್ಮಿಕ ವಲಯದಲ್ಲೂ ಭ್ರಷ್ಟತೆ ವಿಜೃಂಭಿಸುತ್ತಿದೆ. ನಾಯಿಕೊಡೆಗಳಂತೆ ಎದ್ದು ನಿಂತಿರುವ, ನಿಲ್ಲುತ್ತಿರುವ ಮಠ ಮಾನ್ಯಗಳು ಕೇವಲ ಅಧ್ಯಾತ್ಮಿಕ ಚಟುವಟಿಕೆಗಳಿಗೆ ಮಾತ್ರ ಸೀಮಿತಗೊಂಡು ಉಳಿಯದೆ, ಪೀಠಾಧಿಕಾರಕ್ಕಾಗಿ ಮಠಪತಿಗಳು, ಸ್ವಾಮಿಗಳ ನಡುವೆಯೇ ಮೇಲಾಟ ಜಿದ್ದಾಜಿದ್ದಿ ನಡೆಯುತ್ತಿದೆ. ವ್ರತ, ನೇಮ, ನಿಷ್ಠೆಗಳು ಆಚಾರ–ವಿಚಾರಗಳು ಹಿಂದಕ್ಕೆ ಸರಿದು ಕಾಯವಿಕಾರ, ಕಾಮವಿಕಾರಗಳದು ಮೇಲುಗೈಯಾಗಿದೆ. ಹೀಗಿರುವಾಗ ಶರಣೆಯರು ಎತ್ತಿ ಹಿಡಿದ, ನುಡಿದ ವ್ರತ, ಆಚಾರ ನೇಮ, ನಿಷ್ಠೆಯ ಸಂಬಂಧವಾದ ವಿಚಾರಗಳು ಅತ್ಯಂತ ಪ್ರಸ್ತುತವೆನಿಸುತ್ತದೆ. ನೇರ, ನಿಷ್ಠುರವಾದ ಅವರ ಮಾತುಗಳು ಭ್ರಷ್ಟತೆಯ ಅನಾರೋಗ್ಯದಿಂದ ನರಳುತ್ತಿರುವ ಧಾರ್ಮಿಕ ವ್ಯವಸ್ಥೆ, ಮಠ ಮಾನ್ಯಗಳ ಮುಖಂಡರಿಗೆ ಚಿಕಿತ್ಸಕವೆನಿಸುತ್ತವೆ.

ರೇವಣ ಸಿದ್ಧಯ್ಯಗಳ ಪುಣ್ಯಸ್ತ್ರೀಯಾದ ರೇಕಮ್ಮೆ ಲಿಂಗಬಾಹ್ಯನ, ಆಚಾರಭ್ರಷ್ಟನ, ವ್ರತ ತಪ್ಪುಕನ ನೋಡಲೇ ಬಾರದೆನ್ನುತ್ತಾಳೆ. ವ್ರತಭ್ರಷ್ಟರ ಕಂಡರೆ ಕಿಡಿಕಾರುತ್ತಾಳೆ ಅಕ್ಕಮ್ಮ. 'ಪರಸ್ತ್ರೀ ಪರಧನಂಗಳಲ್ಲಿ ನಿಂದೆಗೆ ಒಡಲಾಗದಿದ್ದುದೆ ವ್ರತ; ಸರ್ವಭೂತಹಿತನಾಗಿ ದಯವಿದ್ದುದೆ ಆಚಾರ" ತನ್ನಯ ಸ್ವಪ್ನದಲ್ಲಿ ತನಗಲ್ಲದುದ ಕಂಡಡೆ, ತಾ ಮುಟ್ಟದುದ ಮುಟ್ಟಿದಡೆ, ತಾ ಕೊಳ್ಳದುದಕೊಂಡಡೆ, ಆ ಸೂಕ್ಷ್ಮತನುವಿನಲ್ಲಿ ಆ ತೆನುವಂ ಬಿಟ್ಟು ನಿಂದುದೆ ಆಚಾರ.....' ಅಂತರಂಗದಲ್ಲಿ ವ್ರತ, ಬಹಿರಂಗದಲ್ಲಿ ಆಚಾರ ಉಭಯ

ಸಿದ್ಧವಾಗಿ ನಡೆವುದೇ ಆಚಾರ' –ಹೀಗೆ ವ್ರತಾಚಾರಗಳ ಸ್ವರೂಪವನ್ನು ವಿವರಿಸುತ್ತಾಳೆ. ಉದರ ಪೋಷಣೆಗೆ ಮಂಡೆ ಬೋಳಿಸಿಕೊಂಡು, ಬತ್ತಲು ಇದ್ದುಕೊಂಡು, ಜಡೆಗಟ್ಟಿಸಿಕೊಂಡು ವೇಷಧಾರಿಗಳಾಗಿ ಸೋಗು ಹಾಕುವವರನ್ನೆಲ್ಲ ಮುಂಡೆ ಮಕ್ಕಳು, ಕತ್ತೆ ಮರಿಗಳು ಎಂದೆಲ್ಲ ಕಟುವಾಗಿ ಟೀಕಿಸುತ್ತಾಳೆ.

ಎಲ್ಲ ಬಗೆಯಲ್ಲೂ ವಂಚಿಸುವ ಜನ ತುಂಬಿಕೊಂಡಿರುವಾಗ, ನಿಜ ನಿಷ್ಠೆ. ಶೀಲ ಚಾರಿತ್ರ್ಯಗಳನ್ನು ಮರೆತು, ತಮ್ಮ ಗೌರವ, ಪ್ರತಿಷ್ಠೆಗಳನ್ನು ಮರೆತು ಸ್ವಾರ್ಥ ಮೋಹಗಳಿಂದಾಗಿ ಜನ ಸಾಮಾನ್ಯರಿಂದ ಹಿಡಿದು ಧಾರ್ಮಿಕ ನಾಯಕರೂ ಸೇರಿದಂತೆ ತೋರಿಕೆಯ ಬದುಕನ್ನು ಬದುಕುತ್ತಿರುವ ಇಂದಿನ ದಿನಗಳಲ್ಲಿ ಇಂತಹ ವಿಚಾರಗಳು ಅನಿವಾರ್ಯವಾಗುತ್ತವೆ.

ಕಾಲ ಯಾವುದೇ ಆದರೂ ಮೂಲಭೂತ ಮನುಷ್ಯ ಪ್ರವೃತ್ತಿಗಳು ವಂಶವಾಹಿಗಳಂತೆ ಹರಿದು ಬರುತ್ತವೆ: ಮನುಷ್ಯರಲ್ಲಿ ನೆಲೆಗೊಂಡಿರುತ್ತವೆ. ಶರಣಧರ್ಮದ ಆಚೆಗೂ ಶರಣೆಯರು ಅಂದು ಅಭಿವ್ಯಕ್ತಿಸಿದ ವಿಚಾರಗಳು, ಅವರ ನಡೆನುಡಿಗಳು, ಸ್ವತಂತ್ರ ನಿಲುವುಗಳು ಎಲ್ಲ ಕಾಲಕ್ಕೂ ಒಂದಲ್ಲ ಒಂದು ರೀತಿಯಲ್ಲಿ ನಮ್ಮ ವ್ಯಕ್ತಿತ್ವಗಳನ್ನು ಆದರ್ಶಪೂರ್ಣವಾಗಿ, ಸದಾಚಾರ ಸಂಪನ್ನವಾಗಿ ರೂಪಿಸಿಕೊಳ್ಳಲು ಮತ್ತು ಮಾನಸಿಕ ಸ್ವಸ್ಥತೆಯನ್ನು, ಶುದ್ಧ ಚಾರಿತ್ರ್ಯವನ್ನು ಕಾಪಾಡಿಕೊಳ್ಳಲು, ನೈತಿಕ ಶಿಸ್ತನ್ನು ಅಳವಡಿಸಿಕೊಳ್ಳಲು ಕೈ ದೀವಿಗೆಗಳಾಗುವಂತಿವೆ. ಮಹಿಳಾ ಚರಿತ್ರೆಯ ಅಧ್ಯಯನಕಾರರಿಗಂತೂ ಶರಣೆಯರ ಬದುಕು, ಅಧ್ಯಾತ್ಮಿಕ ಸಾಧನೆಗಳು ಮಹತ್ವ ಸಂಗತಿಗಳಾಗಿವೆ.



**ಕರ್ನಾಟಕ ಲೋಚನ**
ಸಂಪುಟ ೨೭, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೩

# ೨, ಕನ್ನಡ ವೈದಿಕ ರಾಮಾಯಣಗಳು

**-ಪ್ರೊ|| ಶಾಂತರಾಜು***

ದಿನ ನಿತ್ಯದ ಕಾರ್ಯದಲ್ಲಿ ನಮ್ಮನ್ನು ನಾವು ತೊಡಗಿಸಿಕೊಳ್ಳುವುದೇ ಹಿರಿಯರು ನಮಗೆ ಕೊಟ್ಟ ಸಂಸ್ಕಾರ. ಅಂತಹ ಸಂಸ್ಕಾರವಂತರ ಹೆಸರುಗಳಲ್ಲಿ ಮೊದಲಿಗೆ ಕಾಣಿಸುವುದು ಶ್ರೀರಾಮ. ಶ್ರೀರಾಮನ ದಿವ್ಯಚರಿತೆ ಇಂದಿಗೂ ಜಗದ್ವಿಖ್ಯಾತವಾಗಿದೆ. ಆ ಮಹಾಕಾವ್ಯವು ಮಹಾಮುನಿ ವಾಲ್ಮೀಕಿ ವಿರಚಿತ ಶ್ರೀ ಮದ್ರಾಮಾಯಣ. ನಮ್ಮ ಸಂಸ್ಕೃತಿಯ ಪ್ರತೀಕವಾದ ಈ ಮಹಾ ಕಾವ್ಯವು ೨೪,೦೦೦ ಶ್ಲೋಕಗಳಿಂದ ಕೂಡಿದೆ. ಸಂಸ್ಕೃತದಲ್ಲಿ ಅತ್ಯಂತ ಸರಳ ಹಾಗೂ ಸೊಗಸಾಗಿ ಮನಮುಟ್ಟುವಂತೆ ರಚಿತಗೊಂಡಿರುವ ಈ ಕಾವ್ಯ ಭಾರತೀಯ ಹಾಗೂ ವಿದೇಶಿ ಭಾಷೆಗಳಿಗೆ ಪಸರಿಸಿ ಆಯಾಯ ಭಾಷೆಗಳಲ್ಲಿ ಅನೇಕ ರಾಮಾಯಣ ಕೃತಿಗಳು ಹೊರಬರಲು ಪ್ರೇರಣೆ ನೀಡಿದೆ. ಹಾಗೆಯೇ ಕನ್ನಡ ಭಾಷೆಯಲ್ಲೂ ಸುಮಾರು ೧೦ನೆಯ ಶತಮಾನದಿಂದ ಪ್ರಭಾವವನ್ನುಂಟು ಮಾಡಿ ಹಲವಾರು ಕಾವ್ಯಗಳು ಸೃಷ್ಟಿಗೊಂಡಿವೆ.

ಕನ್ನಡದಲ್ಲಿ ರಾಮಾಯಣ ಕುರಿತ ಕಾವ್ಯಗಳಿಗೆ ಕೊರತೆಯೇನೂ ಇಲ್ಲ. "ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ, ತಿಂಥಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ"[೧] ಎಂಬ ಕುಮಾರವ್ಯಾಸನ ಮಾತು ಸುವಿದಿತ. ೧೦ನೆಯ ಶತಮಾನದಲ್ಲಿ ಜೈನ ಪರಂಪರೆಯ ಅನುಸಾರ ಆ ಧರ್ಮಕ್ಕೆ ಅನುಗುಣವಾಗಿ **'ರಾಮಚಂದ್ರ ಚರಿತ ಪುರಾಣ'** ನಾಗಚಂದ್ರ ರಚಿಸಿದ್ದರೆ, ೧೩ನೆಯ ಶತಮಾನದಲ್ಲಿ ಕುಮುದೇಂದುವಿನಿಂದ ರಚಿತವಾದ **'ಕುಮುದೇಂದು ರಾಮಾಯಣ'**, ಸುಮಾರು ೧೬ನೆಯ ಶತಮಾನದ

* ಕನ್ನಡ ವಿಭಾಗದ ಮುಖ್ಯಸ್ಥರು, ವಿಜಯ ಸಂಜೆ ಕಾಲೇಜು, ಆರ್. ವಿ. ರಸ್ತೆ, ಬಸವನಗುಡಿ, ಬೆಂಗಳೂರು-೫೬೦ ೦೦೪. ಮೊಬೈಲ್ : ೯೯೮೦೪೮೧೪೮೪.

೧. ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಸಂ.), ಕುಮಾರವ್ಯಾಸ ಭಾರತ, ಆದಿಪರ್ವ, ಪು-೨.

ದೇವಪ್ಪ ಕವಿಯ **'ರಾಮವಿಜಯ ಕಾವ್ಯ'** ೧೮ನೆಯ ಶತಮಾನದ ದೇವಚಂದ್ರನ **'ರಾಮವಿಜಯ ಚರಿತೆ'** ಹಾಗೂ ೧೯ನೆಯ ಶತಮಾನದ ಆದಿಭಾಗದಲ್ಲಿದ್ದ ಚಂದ್ರಸಾಗರ ವರ್ಣಿಯ **'ಜಿನರಾಮಾಯಣ'** ಎಂಬ ಈ ಐದು ಕಾವ್ಯಗಳು ಕನ್ನಡದಲ್ಲಿ ಪ್ರಸಿದ್ಧ ಜೈನ ರಾಮಾಯಣಗಳಾಗಿವೆ. ಇವುಗಳೆಲ್ಲ ಜೈನಪರಂಪರೆಯ ಎರಡು ಶಾಖೆಗಳಲ್ಲಿ ಯಾವುದಾದರೊಂದು ಕಥಾಪರಂಪರೆಯ ಪ್ರಭಾವಕ್ಕೆ ಒಳಗಾಗಿ ರಚಿತವಾದವುಗಳಾಗಿವೆ.

ವೈದಿಕ ಪರಂಪರೆಯನ್ನೊಳಗೊಂಡ ರಾಮಾಯಣ ಕಾವ್ಯಗಳು ಕನ್ನಡ ನಾಡಿನಲ್ಲಿ ತುಂಬ ತಡವಾಗಿ ಕಾಣಿಸಿಕೊಂಡಿವೆ. ಹರಿದಾಸರು ರಾಮಾಯಣದ ದೃಷ್ಟಾಂತಗಳನ್ನು ತಮ್ಮ ಕೀರ್ತನೆಗಳಲ್ಲಿ ಬಳಸಿಕೊಂಡು ತಮ್ಮ ಕೀರ್ತನೆಯ ಮೂಲಕ ಭಕ್ತಿಪೂರ್ವಕವಾಗಿ ಹಾಡಿದ್ದಾರೆ.

ಕನ್ನಡ ನಾಡಿನಲ್ಲಿ ಚಂಪೂ ಸಾಹಿತ್ಯ ಯುಗ ಮುಗಿಯುತ್ತಾ ಬಂದಂತೆಲ್ಲಾ ವಚನ ಸಾಹಿತ್ಯ ಮತ್ತು ದಾಸಸಾಹಿತ್ಯ ಸಮಾಜದಲ್ಲಿ ಉಂಟಾಗಿದ್ದ ಸಾಹಿತ್ಯಕ ಕೊರತೆಯ್ನು ನೀಗಿಸುವಲ್ಲಿ ಶಕ್ತಿಯುತವಾದವು. ಈ ಸಂದರ್ಭದಲ್ಲಿ ರಾಜಮಹಾರಾಜರಿಗೆ ನೀಡಿದ್ದ ಆದ್ಯತೆಯನ್ನು ಗೌಣಗೊಳಿಸಿ ಶ್ರೀಸಾಮಾನ್ಯನಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿ ಸಾಹಿತ್ಯ ಸಂಪ್ರದಾಯದಲ್ಲಿ ಒಂದು ದೊಡ್ಡ ಕ್ರಾಂತಿಯನ್ನು ಉಂಟು ಮಾಡಿದವು. ವಚನ ಸಾಹಿತ್ಯ ಕಾಯಕಕ್ಕೆ ಹೆಚ್ಚಿನ ಮಹತ್ವವನ್ನು ನೀಡಿದರೆ, ದಾಸಸಾಹಿತ್ಯ ಹರಿಭಕ್ತಿಗೆ ಆದ್ಯತೆ ನೀಡಿತು. ತಮ್ಮ ಭಕ್ತಿಯ ವಿಚಾರಗಳನ್ನು ಸಾಮಾನ್ಯರಲ್ಲಿ ಭಕ್ತಿಯನ್ನು ಪ್ರಧಾನಿಸುವುದರಲ್ಲಿ ರಾಮಾಯಣ ಹಾಗೂ ಮಹಾಭಾರತ, ಭಾಗವತ ದೃಷ್ಟಾಂತಗಳನ್ನು ಹಾಗೂ ಪಾತ್ರಗಳನ್ನು ಬಳಸಿಕೊಂಡರು. ಆ ಸಂದರ್ಭದಲ್ಲಿ ರಾಮಾಯಣದ ಘಟನೆಗಳು ಶ್ರೀಸಾಮಾನ್ಯನಿಗೆ ಪರಿಚಯಿಸುವಲ್ಲಿ ದಾಸರು ಮಹತ್ವದ ಪಾತ್ರವನ್ನು ನಿರ್ವಹಿಸಿದ್ದಾರೆ. ಇಂತಹ ಬಿಡಿ ಬರಹಗಳನ್ನು ಹೊರತುಪಡಿಸಿದರೆ ವೈದಿಕ ಪರಂಪರೆಯಲ್ಲಿ ಮೊಟ್ಟ ಮೊದಲಿಗೆ ಕಾಣಿಸಿಕೊಳ್ಳುವ ಮಹಾ ಕಾವ್ಯವೆಂದರ ಕುಮಾರ ವಾಲ್ಮೀಕಿಯ 'ತೊರವೆ ರಾಮಾಯಣ'.

ಕುಮಾರವ್ಯಾಸನ ಪ್ರಭಾವಲಯದಲ್ಲಿ ಬಂದ ಕುಮಾರ ವಾಲ್ಮೀಕಿ ಶ್ರೀರಾಮ ಭಕ್ತಿಪರವಾದ ರಾಮಾಯಣವನ್ನು ರಚಿಸಿದನು. ಭಾಗವತ ಧರ್ಮದ ಪ್ರಭಾವವು ಕುಮಾರವಾಲ್ಮೀಕಿಯ ಮೇಲೆ ಬಿದ್ದಂತೆ, ದಾಸ ಸಂಪ್ರದಾಯದ ಭಕ್ತಿಪಂಥವು ಅವನ ಮೇಲೆ ಪರಿಣಾವನ್ನುಂಟು ಮಾಡಿದೆ. ಕುಮಾರವ್ಯಾಸನು ಶ್ರೀಕೃಷ್ಣನನ್ನು ತನ್ನ ಭಕ್ತಿ ನಿರೂಪಣೆಗೆ ನಾಯಕನನ್ನಾಗಿಸಿಕೊಂಡರೆ ಕುಮಾರವಾಲ್ಮೀಕಿ ಶ್ರೀರಾಮನನ್ನು ತನ್ನ ಕಾವ್ಯದ ನಾಯಕನನ್ನಾಗಿಸಿಕೊಂಡು, ಕುಮಾವ್ಯಾಸನ ಮಾರ್ಗವನ್ನು ಅನುಸಿರಿಸಿದ್ದಾನೆ. ವಾಲ್ಮೀಕಿಯ ಕಥಾ ಸರಣಿಯನ್ನು ಅನುಸಿರಿಸಿ ಬಂದ ಕನ್ನಡದ ಮೊದಲ ವೈದಿಕ

ಕಾವ್ಯವೆಂಬ ಖ್ಯಾತಿಗಳಿಸಿ ಈ ಕೃತಿ ಕುಮಾರ ವಾಲ್ಮೀಕಿಗೆ ಮಹತ್ವದ ಸ್ಥಾನವನ್ನು ಗಳಿಸಿಕೊಟ್ಟಿದೆ.

ಕುಮಾರ ವಾಲ್ಮೀಕಿ ಎಂಬುದು ತೊರವೆ ನರಹರಿಯ ಕಾವ್ಯನಾಮ. ಈತ ತೊರವೆ ನರಸಿಂಹ ದೇವರ ಭಕ್ತ. ತನ್ನ ಕಾವ್ಯದಲ್ಲಿ "ಆದಿಕವಿ ಕವಿರಾಜಹಂಸನ । ನಾದಿಕವಿಕುಲಕಮಲಮಿತ್ರ ಮಹಾದಿನೌಕಸಪ್ರಚುರ ಭಾಷಾಕವಿಜಯೋತ್ತಂಸ"[೨] ಎಂದು ವಾಲ್ಮೀಕಿಯನ್ನು ಗುಣಗಾನ ಮಾಡುತ್ತ, ಹಾಗೆಯೇ ತನ್ನನ್ನು **'ಚಾರುತರ ಕವಿರಾಜ ಹಂಸ ಕುಮಾರ ವಾಲ್ಮೀಕಿ'** ಎಂದು ಹೇಳಿಕೊಂಡಿರುವುದರಿಂದ ಇವನಿಗೆ ಕವಿರಾಜ ಹಂಸ ಎಂಬ ಬಿರುದು ಇದ್ದಿತೆಂದು ಹೇಳಬಹುದು. ಈತ ರಾಮಾಯಣ ಕಾವ್ಯವನ್ನಷ್ಟೆ ಅಲ್ಲದೆ ಮೈರಾವಣನ ಕಾಳಗ ಎಂಬ ಷಟ್ಪದಿ ಗ್ರಂಥವನ್ನು ಬರೆದಿದ್ದಾನೆಂಬುದಾಗಿ ಪ್ರಚಲಿತದಲ್ಲಿದೆ.

ಕುಮಾರ ವಾಲ್ಮೀಕಿಯು ಶ್ರೀರಾಮ ಚರಿತೆಯನ್ನು ವಿಸ್ತರಿಸುವಲ್ಲಿ ಬಹುಮಟ್ಟಿಗೆ ಮೂಲ ವಾಲ್ಮೀಕಿ ರಾಮಾಯಣವನ್ನೇ ಅನುಸರಿಸಿದ್ದಾನೆ. ತನ್ನದೇ ಆದ ಶೈಲಿಯಲ್ಲಿ ಕಥೆಯನ್ನು ನಿರೂಪಿಸಿದ್ದಾನೆ. ಈ ಕಾವ್ಯವನ್ನು ಕುರಿತಾಗಿ ರಂ. ಶ್ರೀ ಮುಗಳಿಯವರು ತಮ್ಮ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ "ತೊರವೆ ರಾಮಾಯಣವು ವಾಲ್ಮೀಕಿ ರಾಮಾಯಣದ ಸಂಗ್ರಹವೇ ಆಗಿದ್ದರೂ ರಾಮನನ್ನು ವಿಷ್ಣುವಿನ ಅವತಾರವೆಂದು ಭಕ್ತಿಪರವಾಗಿ ನೋಡುವ ಭಾಗವತ ದೃಷ್ಟಿಯ ಪ್ರಭಾವವು ಅದರಲ್ಲಿ ನಿಚ್ಚಳವಾಗಿ ಮೂಡಿದೆ"[೩] ಎಂದು ಹೇಳಿದ್ದಾರೆ. ತೊರವೆ ನರಹರಿಯು ತನ್ನ ಕಾವ್ಯವನ್ನು ಬಾಲಕಾಂಡದಿಂದ ಪ್ರಾರಂಭಿಸಿ, ಶ್ರೀರಾಮ ಪಟ್ಟಾಭಿಷೇಕದವರೆಗೆ ಬಹು ವಿಸ್ತಾರವಾಗಿ ನಿರೂಪಿಸಿದ್ದಾನೆ. ಕುಮಾರ ವಾಲ್ಮೀಕಿಯು ತನ್ನ ಕಾವ್ಯದ ಅನೇಕ ಎಡೆಗಳಲ್ಲಿ ಆಧ್ಯಾತ್ಮ ರಾಮಾಯಣದ ಕೆಲವಂಶಗಳನ್ನು ಅಳವಡಿಸಿಕೊಂಡಿದ್ದಾನೆ ಎಂದು ಕೆಲವು ವಿಮರ್ಶಕರು ಭಾವಿಸಿರುವಂತೆಯೇ ಅನೇಕ ಎಡೆಗಳಲ್ಲಿ ಆಧ್ಯಾತ್ಮ ರಾಮಾಯಣ ಅಳವಡಿಕೆಯಾಗಿದೆ.

ತೊರವೆ ರಾಮಾಯಣ ಕೈಲಾಸದಲ್ಲಿ ಮಹೇಶ್ವರನ ಓಲಗದೊಂದಿಗೆ ಆರಂಭಗೊಳ್ಳುತ್ತದೆ. ಓಲಗದಲ್ಲಿ ಗೌರಿದೇವಿಯು "ಕೇಶವಾದಿ ಸಹಸ್ರನಾಮ ವಿಲಾಸದೊಳಗೆ ಅಧಿನಾಮಧೇಯದ ಭಾಸುರಾನುಗ್ರಹ ರಹಸ್ಯವನು ಅಱುಹಬೇಕು"[೪] ಎಂದು ವಿನಮ್ರತೆಯಿಂದ ಶಿವನನ್ನು ಕೋರುತ್ತಾಳೆ. ಆಗ ಪರಶಿವನು ಜಗತ್ತಿನ ಜೀವಿಗಳ ಅಂತರ್ಯಾಮಿಯಾದ ವಿಷ್ಣುವಿನ ನಿಜ ರೂಪ ಹಾಗೂ ಅವನ ಅವತಾರಗಳನ್ನು

---

೨. ಬಾಲಕಾಂಡ, ತೊರವೆ ರಾಮಾಯಣ, ಪು.-೪೫.

೩. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪು.-೨೪೭.

೪. ಬಾಲಕಾಂಡ. ತೊರವೆ ರಾಮಾಯಣ, ಪು.-೪೯

ಹೇಳುತ್ತಾ ಅವುಗಳಲ್ಲಿ ಒಂದಾದ ರಾಮನ ಮಹಿಮೆಯನ್ನು ವಿವರಿಸಲು ತೊಡಗುತ್ತಾನೆ. ಹೀಗೆ ಈ ಕಾವ್ಯ ಕಥಾರಂಭವು ಪಾರ್ವತಿ ಪರಮೇಶ್ವರರ ಸಂವಾದ ರೂಪವಾದ ಅಧ್ಯಾತ್ಮ ರಾಮಾಯಣವನ್ನು ಹೋಲುತ್ತದೆ.

ನರಹರಿಯು ಉಮಾಮಹೇಶ್ವರ ಸಂವಾದದ ಭೂಮಿಕೆಯನ್ನು ನಿರ್ಮಿಸಿದ ಬಳಿಕ ವಾಲ್ಮೀಕಿಯ ಕಥೆಯನ್ನು ವಿವರಿಸುತ್ತಾನೆ. ಚೋರ ವೃತ್ತಿಯಲ್ಲಿದ್ದ ವ್ಯಾಧನು ಭಾರದ್ವಜ ಮುನಿಗಳ ಕರುಣೆಯಿಂದ ವಾಲ್ಮೀಕಿ ಮಹರ್ಷಿಗಳಾದ ಬಗೆಯನ್ನು ವಿವರಿಸುತ್ತಾನೆ. ಒಂದು ದಿನ ಮುನಿಗಳ ಎದುರಿಗೆ ಬೇಡನೊಬ್ಬನು ಕ್ರೌಂಚ ಪಕ್ಷಿಗಳ ಜೋಡಿಯಲ್ಲಿ ಗಂಡು ಕ್ರೌಂಚವನ್ನು ಕೊಲ್ಲುತ್ತಾನೆ. ಅದು ಗಾಯಗೊಂಡು ರಕ್ತಸಿಕ್ತವಾಗಿ ನೆಲಕ್ಕೆ ಉರುಳುತ್ತದೆ. ನೆಲಕ್ಕೆ ಬಿದ್ದ ಗಂಡು ಪಕ್ಷಿಯ ಸುತ್ತ ಹೆಣ್ಣು ಕ್ರೌಂಚವು ಚೀರುತ್ತಾ ಸುತ್ತುತ್ತಿರುತ್ತದೆ. ಇದನ್ನು ನೋಡಿದ ವ್ಯಾಧ

**"ನೊಂದುದಲ್ಲ ಕ್ರೌಂಚ ಪತಗ ಪು**
**ರಂದರನು ತಾನೆನುತ ಮನದಲಿ ।**
**ನೊಂದು ನಯನದೊಳೊಸರಿಸಿದನಶ್ರುಗಳ ಧಾರೆಗಳ**
**ಒಂದು ನಿಮಿಷಕೆ ವಿಹಗ ಪತಿ ಬಳಿ ।**
**ಕೊಂದಿದುದು ಮರಣದಲಿ ಕೇಳರ ।**
**ವಿಂದ ಮುಖ ಹಳವಿಸಿದನಾ ಮುನಿನಾಥ ಮರುಕದಲಿ"**[೫]

ಎಂದು ಮನಸ್ಸಿನಲ್ಲಿ ಪರಿತಪಿಸುತ್ತಾ ಆತನ ಕಣ್ಣುಗಳಿಂದ ನೀರು ಒತ್ತರಿಸಿ ಬಂದಿತು. ಗಂಡು ಕ್ರೌಂಚ ಪಕ್ಷಿಯು ಮರಣವನ್ನಪ್ಪಿದಾಗ ವ್ಯಾಧನು ಮರುಕದಿಂದ ಪ್ರಲಾಪಿಸಿದನು. ಆತನಲ್ಲಾದ ಬದಲಾವಣೆಯನ್ನು ನಾರದ ಮುನಿಗಳು ಕುತೂಹಲದಿಂದ ಕಂಡು ಶೋಕಮುಖದಲ್ಲಿ ಸನ್ನಿಹಿತವಾದ ಶ್ಲೋಕವನ್ನು ಸುಕಾವ್ಯ ರಚನೆಯಲ್ಲಿ ವಹಿಸಿದರೆ ಮುಂದೆ ಅದು ಪ್ರಸಿದ್ಧವಾಗುತ್ತದೆ. ಬಳಿಕ ಈ ಲೋಕದಲ್ಲಿ ನಿನಗೆ ಕೀರ್ತಿ ಲಭಿಸುತ್ತದೆ ಎಂದು ಹೇಳಿದ ನಂತರ ನಾರದರು ರಘುರಾಮನ ಚರಿತೆಯನ್ನು ಸಂಕ್ಷೇಪವಾಗಿ ವಾಲ್ಮೀಕಿಗೆ ಅನುಗ್ರಹಿಸುತ್ತಾರೆ. ಒಂದು ದಿನ ಲವ-ಕುಶರು ಮುನಿಗಳ ಪಾದಗಳಿಗೆ ನಮಸ್ಕರಿಸಿ, ತಮ್ಮ ತಂದೆ, ತಾಯಿ ಯಾರು ? ತಮ್ಮ ವಂಶ ಯಾವುದು ಎಂದು ಪ್ರಶ್ನಿಸಿದಾಗ ವಾಲ್ಮೀಕಿ ಮುನಿಗಳು ಇಕ್ಷ್ವಾಕುವಂಶದ ಪರಂಪರೆಯನ್ನು ಲವಕುಶರಿಗೆ ಅರಹುವಂತೆ ಕುಮಾರ ವಾಲ್ಮೀಕಿ ತನ್ನ ಇಡೀ ಕಾವ್ಯವನ್ನು ರಚಿಸಿದ್ದಾನೆ. ತನ್ನ ಕಾವ್ಯದ ಮಧ್ಯ, ಮಧ್ಯದಲ್ಲಿ ಕುಶ-ಲವರಿಗೆ ವಾಲ್ಮೀಕಿಗಳು ಕಥೆ ಹೇಳುವಂತೆ ಬರುತ್ತದೆ. ಇಡೀ ಕಾವ್ಯದುದ್ದಕ್ಕೂ ಕುಶ-ಲವರು ಕಿವಿಗಳಾಗಿದ್ದಾರೆ.

---

೫. ಕುಮಾರ ವಾಲ್ಮೀಕಿ ತೊರವೆ ರಾಮಾಯಣ. ಬಾಲಕಾಂಡ. ಎರಡನೇ ಸಂಧಿ. ಪುಟ-೫೧

ಕಥಾ ನಿರ್ವಹಣೆಯಲ್ಲಿ ವಾಲ್ಮೀಕಿ ರಾಮಾಯಣಕ್ಕೂ, ತೊರವೆರಾಮಾಯಣಕ್ಕೂ ಹೆಚ್ಚಿನ ವ್ಯತ್ಯಾಸಗಳು ಕಂಡುಬರುವುದಿಲ್ಲ. ವಾಲ್ಮೀಕಿ ರಾಮಾಯಣದಲ್ಲಿ ವಿವರವಾಗಿ ಬರುವ ಕೆಲವು ಪೂರ್ವ ಕಥೆಗಳನ್ನು ಆಖ್ಯಾನಗಳನ್ನು ಕುಮಾರ ವಾಲ್ಮೀಕಿ ಬೇಕಾದೆಡೆ ಸಂಗ್ರಹಿಸಿ ಹೇಳಿದ್ದಾನೆ. ಇಲ್ಲದಿದ್ದರೆ ಅಂತಹವುಗಳನ್ನು ಸಂಪೂರ್ಣ ಕೈಬಿಟ್ಟಿದ್ದಾನೆ. ಇದರಿಂದ ಮೂಲಕಥೆಗೆ ಯಾವುದೇ ರೀತಿಯ ಧಕ್ಕೆಯುಂಟಾಗಿಲ್ಲ. ಬಾಲಕಾಂಡದಲ್ಲಿ ವಿಶ್ವಾಮಿತ್ರರು ಯಾಗ ರಕ್ಷಣೆಗಾಗಿ ರಾಮಲಕ್ಷ್ಮಣರನ್ನು ಕರೆದೊಯ್ಯಲು ಬರುತ್ತಾರೆ. ಆಗ ವಾಲ್ಮೀಕಿಯು ವಿಶ್ವಾಮಿತ್ರ ಪೂರ್ವ ಕಥೆಯನ್ನೆಲ್ಲ ಸವಿಸ್ತಾರವಾಗಿ ಕೊಡುತ್ತಾರೆ. ಆದರೆ ಕುಮಾರ ವಾಲ್ಮೀಕಿಯು ಈ ಯಾವ ಕಥೆಗಳನ್ನೂ ತನ್ನ ಕಾವ್ಯದಲ್ಲಿ ವಿಸ್ತರಿಸಲು ಹೋಗಿಲ್ಲ. ವಾಲ್ಮೀಕಿ ರಾಮಾಯಣದಲ್ಲಿ ಕುಶನಾಭಕನ್ಯೆಯರ ಆಖ್ಯಾನ, ಸಗರ ಪುತ್ರನ ಕಥೆ, ಗಂಗಾವತರಣ ಕಥೆ, ಅಮಲೋತ್ಪತ್ತಿಯ ಕಥೆ ಸುಮಾರು ಎಪ್ಪತ್ತೇಳು ಸರ್ಗಗಳಲ್ಲಿ ತುಂಬಿದೆ. ಆದರೆ ಕುಮಾರ ವಾಲ್ಮೀಕಿ ಕೇವಲ ಮೂವತ್ತು ಸರ್ಗಗಳಲ್ಲಿ ಸಂಗ್ರಹಿಸಿ ಯೋಗ್ಯವಾದ ರೀತಿಯಲ್ಲಿ ಕೊಟ್ಟಿದ್ದಾನೆ.

ಆಶ್ರಮದಲ್ಲಿದ್ದ ವಿಶ್ವಾಮಿತ್ರನು ಮಾರೀಚ ಸುಬಾಹುಗಳೆಂಬ ರಾಕ್ಷಸರ ಉಪಟಳದಿಂದ ಬೇಸತ್ತು ಅವರನ್ನು ನಿವಾರಿಸುವ ಉಪಾಯವನ್ನು ಅರಿಯದೆ ಬ್ರಹ್ಮನ ಬಳಿಗೆ ಹೋಗು ತ್ತಾನೆ. ಆಗ ಬ್ರಹ್ಮ “ಏಕೆ ಭಯ ಗೋಮಿನಿಯ ಪತಿರುಂಹರಿಯ ಭಾರವನೊನೆಯಲುದಿಸಿದನಹನೆ ದಶರಥಭವನದಲಿ, ಕೊಂಡುಹೋಗು ವಿಬುಧರಿಪುವೇ ತಂಡ ಪಂಚಾನನನಸಾಹವ ಚಂಡ ಚಟುಳ ಪರಾಕ್ರಮನೆ ಮಾಯಾತ್ರಿವಿಕ್ರಮನ ಬಗೆಯಿದು ಬೇಗ ಹೋಗೆನೆ ಮಂಡೆಯ ಮಣಿದಿಳಿದನವನೀ ಮಂಡಲಕಿ ಮುದದಿಂದ ವಿಶ್ವಾಮಿತ್ರ ಮುನಿರಾಮ.”[೬] ದಶರಥನ ಮನೆಗೆ ಬಂದ ವಿಶ್ವಾಮಿತ್ರನು ರಾಮಲಕ್ಷ್ಮಣರೊಡನೆ ವಾಪಸ್ಸಾದನು.

ಮೂಲ ರಾಮಾಯಣದಲ್ಲಿ ಧನುರ್ಭಂಗದ ಹಾಗೂ ಸೀತಾ ವಿವಾಹದ ವಿವರಗಳು ಬಂದಿವೆಯೇ ಹೊರತು ಸ್ವಯಮವರದ ವರ್ಣನೆ ಬಂದಿಲ್ಲ. ವಿಶ್ವಾಮಿತ್ರನು ಶಿವಧನಸ್ಸನ್ನು ರಾಮ–ಲಕ್ಷ್ಮಣರಿಗೆ ತೋರಿಸಬೇಕೆಂಬ ಇಚ್ಛೆಗೆ ಜನಕನು ಆ ಧನಸ್ಸಿನ ಪೂರ್ಣ ವಿಚಾರವನ್ನು ವಿವರಿಸುತ್ತಾನೆ. ಅಂತೆ ಬಿಲ್ಲನ್ನು ಎದೆಗೇರಿಸಿ, ರಾಮ ಬಿಲ್ಲನ್ನು ಮುರಿದು ಸೀತೆಯನ್ನು ವಿವಾಹವಾಗುತ್ತಾನೆ. ಸೀತೆಯನ್ನು ಅಲಂಕರಿಸಿ ಸಭೆಗೆ ಕರೆತರುವ ಸಂದರ್ಭದಲ್ಲಿ ರಾಜ ಮಹಾರಾಜರನ್ನು ತೋರಿಸುವ ಸನ್ನಿವೇಶಗಳಲ್ಲಿ, ಬಿಲ್ಲನ್ನು ಎದೆಗೇರಿಸುವ ಸಂದರ್ಭದಲ್ಲಿ ನಗೆಗೀಡಾದ ಪ್ರಸಂಗದಲ್ಲಿ ಕುಮಾರ ವ್ಯಾಸನ ಕಾವ್ಯವನ್ನು ಅಲ್ಲಲ್ಲಿ ನೆನಪಿಗೆ ತರುತ್ತದೆ.

---

೬. ಕುಮಾರ ವಾಲ್ಮೀಕಿ ತೊರವೆ ರಾಮಾಯಣ, ಬಾಲಕಾಂಡ, ಎರಡನೇ ಸಂಧಿ, ಪುಟ–೧೨೫

ವಾಲ್ಮೀಕಿ ರಾಮಾಯಣದಲ್ಲಿ ಬಹು ವಿಸ್ತಾರವಾಗಿರುವ ಕೈಕೆಯು ತನಗೆ ನೀಡುವುದಾಗಿ ದಶರಥ ಹೇಳಿದ್ದ ವರಗಳನ್ನು ಬೇಡುವುದು, ರಾಮ, ಸೀತೆ, ಲಕ್ಷ್ಮಣರ ವನವಾಸವನ್ನು, ಅಯೋಧ್ಯಾಕಾಂಡದ ರಮ್ಯ ಪ್ರಸಂಗಗಳನ್ನು ಕುಮಾರ ವಾಲ್ಮೀಕಿ ಅಷ್ಟು ವಿಸ್ತಾರವಾಗಿಲ್ಲದೆ ಅತ್ಯಂತ ಸ್ಪಷ್ಟವಾಗಿ, ರಮ್ಯವಾಗಿ ಚಿತ್ರಿಸಿದ್ದಾನೆ. ನರಹರಿ ಮಂಥರೆಯನ್ನು **'ಪೂರ್ವ ಮಾಯಾತರುಣಿ'** ಎಂದಿದ್ದಾನೆ. ಅವಳು ನಗರವನ್ನು ಅಲಂಕರಿಸುತ್ತಿದ್ದ ಕಾರಣವನ್ನು ತಿಳಿದು "ಇದನಾದರಿಸಿದಳೈ ಪೂರ್ವ ಮಾಯಾತರುಣಿ ಮಂಥರೆ ಮಥಿಸಿ ಮನದಲಿ ಪೂರ್ವ ಸೂಚಿತವೆ.[೭]" ಮಾಯಾಮೃಗ ಸೀತೆಯನ್ನು ಆಕರ್ಷಿಸಿದ ಪ್ರಸಂಗವಂತು ಕುಮಾರ ವಾಲ್ಮೀಕಿಯಲ್ಲಿ ಅತ್ಯಂತ ಸೊಗಸಾಗಿ ಕವಿ ಪ್ರತಿಭೆಗೆ ಕನ್ನಡಿಯಂತಿದೆ.

ಮುಂದಿನ ಭಾಗದಲ್ಲಿ ಬರುವ ಕಿಷ್ಕಿಂಧಾಕಾಂಡ, ಸುಂದರ ಕಾಂಡಗಳಲ್ಲಿ ಕವಿದ್ವಯರಲ್ಲಿ ಹೆಚ್ಚಿನ ವ್ಯತ್ಯಾಸವೇನು ತೋರುವುದಿಲ್ಲ. ಯುದ್ಧಕಾಂಡ ಅತಿ ವಿಸ್ತಾರವಾಗಿ ಕವಿಯು ತನ್ನ ಕವಿತಾ ಸಾಮರ್ಥ್ಯವನ್ನು ಅತಿ ಉನ್ನತ ಮಟ್ಟದಲ್ಲಿ ಪ್ರದರ್ಶಿಸುವ ಸಲುವಾಗಿ ರಚಿಸಿದ್ದಾನೆಂದು ತೋರುತ್ತದೆ. ಅನೇಕ ಬೇಸರ ತರಿಸುವ ನಿರೂಪಣೆಯ ನಡುವೆಯೂ ಕೆಲವು ರಸವತ್ತಾದ ಸನ್ನಿವೇಶಗಳನ್ನು ಸೃಷ್ಟಿಸಿ ಕವಿ ಚಾತುರ್ಯವನ್ನು ಮೆರೆದಿದ್ದಾನೆ.

ರಾಮನು ಮಾಯಾ ಶಿರಸ್ಸನ್ನು ತಂದು ಹಾಕಿದ ಸಂದರ್ಭವು ವಾಲ್ಮೀಕಿಯಲ್ಲಿ ವಾನರರ ಸಂಖ್ಯಾಬಲದ ನಿರ್ವಹಣೆಯಾದ ಮೇಲೆ ಬರುತ್ತದೆ. ಆದರೆ ತೊರವೆ ರಾಮಾಯಣದಲ್ಲಿ ಅಂಗದನು ಸಂಧಿಗೆ ಹೋಗಿ ಬಂದ ಅನಂತರ ಬರುತ್ತದೆ. ಇಂತಹ ಅನೇಕ ಪ್ರಸಂಗಗಳಲ್ಲಿ ಕುಮಾರ ವಾಲ್ಮೀಕಿ ಹಾಗೂ ವಾಲ್ಮೀಕಿಯಲ್ಲಿ ಸಾಮ್ಯ ವ್ಯತ್ಯಾಸಗಳಿದ್ದೂ, ಅನೇಕ ಪ್ರಸಂಗಗಳಲ್ಲಿ ಆಧ್ಯಾತ್ಮ ರಾಮಾಯಣದಿಂದ ಸ್ಫೂರ್ತಿಯನ್ನು ಹೊಂದಿ ಕುಮಾರ ವಾಲ್ಮೀಕಿ ಕನ್ನಡ ರಸಿಕಲೋಕಕ್ಕೆ ಒಂದು ಉತ್ತಮವಾದ, ಜನಜನಿತವಾದ, ಲೋಕ ಸ್ತುತ್ಯವಾದ ರಾಮಾವತಾರದ ಮಹಾಗ್ರಂಥವನ್ನು ನೀಡಿದ್ದಾನೆ.

ವೈದಿಕ ಸಂಪ್ರದಾಯದಲ್ಲಿ ಶ್ರೀರಾಮನ ಚರಿತ್ರೆಯನ್ನು ಪ್ರಥಮ ಬಾರಿಗೆ ಕನ್ನಡದಲ್ಲಿ ಬರೆದವನು ಕುಮಾರ ವಾಲ್ಮೀಕಿ. ಇವನು ಕುಮಾರವ್ಯಾಸನ ನಂತರ ಭಕ್ತಿಮಾರ್ಗ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ, ರಾಮಪೂಜೆ ಮತ್ತು ರಾಮಭಕ್ತಿ ಜನರ ಮನದಲ್ಲಿ ನೆಲಸಿದ್ದಾಗ ಕುಮಾರ ವ್ಯಾಸನ ಪ್ರೇರಣೆಯಿಂದ ಕುಮಾರ ವಾಲ್ಮೀಕಿಯಾಗಿ ರಾಮಾಯಣವನ್ನು ಬರೆದನು. ಕುಮಾರ ವಾಲ್ಮೀಕಿಯ ತರುವಾಯ ಯಾವ ವೈಶಿಷ್ಟ್ಯತೆ ಇಲ್ಲದಿದ್ದರು ರಾಮನ ಕಥೆಯನ್ನು ತಮ ತಮಗೆ ಅರಿದಂತೆ ಅನೇಕರು ನಿರೂಪಿಸಿದ್ದಾರೆ.

---

೭. ಕುಮಾರ ವಾಲ್ಮೀಕಿ ತೊರವೆ ರಾಮಾಯಣ, ಅಯೋಧ್ಯಾಕಾಂಡ, ಒಂದನೇ ಸಂಧಿ, ಪುಟ–೨೧೧

ಅವರ ಕುತೂಹಲ, ರಾಮಭಕ್ತಿ, ಶ್ರದ್ಧೆ ಮೆಚ್ಚುವಂತದ್ದು. ಇಂತಹ ಕೃತಿಗಳ ನಡುವೆಯೇ ಮೂಡಿಬಂದ ಲಕ್ಷ್ಮೀಶನ ಸೀತಾ ವನವಾಸದ ಕಥೆ ಹಾಗೂ ಮುದ್ದಣನ ಶ್ರೀ ರಾಮಾಶ್ವಮೇಧ ಕೃತಿಗಳು ಉತ್ತಮ ಕೃತಿಗಳಾಗಿ ಮೆರೆಯುತ್ತವೆ.

ಸುಮಾರು ೨೫೦೦ ವರ್ಷದ ಹಿಂದೆ ಹುಟ್ಟಿದ ಶ್ರೀರಾಮನ ಕಥೆ ಪ್ರತ್ಯಕ್ಷ ಪರೋಕ್ಷವಾಗಿ ಇಡೀ ವಿಶ್ವವನ್ನು ಮೇಲ್ಮುಖವಾಗಿ ಕೊಂಡೊಯ್ದಿದೆ. ತನ್ಮೂಲಕ ರಾಮ ಎಂದೋ ಆಗಿಹೋದ ವ್ಯಕ್ತಿಯಲ್ಲ, ಅದು ಎಂದೆಂದಿಗೂ ನಮ್ಮೊಡನಿರುವ ಮಹಾಶಕ್ತಿ ಎಂಬುದು ಸಾಬೀತಾಗುತ್ತದೆ. ರಾಮತತ್ವ ಅತಿ ರಂಜಕ ಹಾಗೂ ರಹಸ್ಯಾತ್ಮಕವಾದದ್ದು. ಸೃಷ್ಟಿ ಹೇಗೆ ಪ್ರತಿನಿತ್ಯ ವಿಕಾಸ ಹೊಂದುತ್ತದೆಯೋ ಅದೇ ರೀತಿ ಶ್ರೀರಾಮತತ್ವ ವಿಕಾಸ ಹೊಂದುತ್ತದೆ. ಇದೊಂದು ಮೈಲುಗಲ್ಲಾಗಿ ನಿಲ್ಲುತ್ತದೆ

ಇಂತಹ ಶ್ರೇಷ್ಠ ಪರಂಪರೆಯಲ್ಲಿ ಮೂಡಿದ ಶ್ರೇಷ್ಠ ಮಹಾಕಾವ್ಯವೆಂದರೆ ಕುವೆಂಪು ಅವರ 'ರಾಮಾಯಣ ದರ್ಶನಂ'. ಸದಾ ಧ್ಯಾನ, ತಪಸ್ಸುಗಳ ನಿರಂತರ ಶ್ರದ್ಧೆಯಿಂದ ಮಹಿಮೆಗೊಳಪಟ್ಟು ಯಾರು ಮಹಾಕವಿಯಾಗಬಲ್ಲರೋ ಅಂಥವರಿಗೆ ಮಾತ್ರ ಆ ಪಟ್ಟ ಸಿದ್ಧಿಸಬಲ್ಲದು. ಇಂತಹ ಪ್ರತಿಭಾ ಶಕ್ತಿಗೆ ನಿಲುಕದ ವಿಷಯವಿಲ್ಲ, ಭಾವವಿಲ್ಲ ಹಾಗೂ ಗೋಚರಿಸದ ಅನುಭವವಿಲ್ಲ, ಇವರನ್ನು ಹಾಡಿಹೊಗಳದ ದಾಸರಿಲ್ಲ, ದಾರ್ಶನಿಕರಿಲ್ಲ.

ಮಲೆನಾಡಿನ ಹೃದಯದಂತಿದ್ದ ಮಲೆನಾಡಿನಲ್ಲಿ ಜನ್ಮ ಪಡೆದ ಕುವೆಂಪು ಮಲೆಯ ಮೊಗದಲ್ಲಿ ನಲಿಯುತ ಬೆಳೆದು ಶ್ರೀರಾಮಕೃಷ್ಣ ಪರಮಹಂಸರ, ಶ್ರೀ ಸ್ವಾಮಿವಿವೇಕಾನಂದರ ಉಪದೇಶಾಮೃತವನ್ನು ಕುಡಿಯುತ್ತಾ ಶಕ್ತಿ ಪಡೆದು ಆತ್ಮೋದ್ಧಾರಕ್ಕಾಗಿ ಸಾಧನೆಯಲ್ಲಿ ತೊಡಗಿದರು. ಜನ್ಮ ಜನ್ಮಾಂತರಗಳ ಸಂಸ್ಕಾರದ ಜೊತೆಗೆ ಹತ್ತಾರು ವರ್ಷಗಳ ಶ್ರೀರಾಮಕೃಷ್ಣಾಶ್ರಮದ ತಪೋಮಹಿಮೆ ಅವರನ್ನು ಅತ್ಯುನ್ನತ ಮಟ್ಟಕ್ಕೆ ಕರೆದೊಯ್ದಿತು. ಆಧ್ಯಾತ್ಮ ಸಾಧನೆ ಬೆಳೆದಂತೆ, ಪಕ್ವಗೊಂಡು ಭೂಮವಾಗಿ ಬೆಳೆದರು. ಅವರ ಪರಿಣತಿಗೆ, ತಪೋಮಹಿಮೆಗೆ, ಪಾರದರ್ಶಿತ್ವಕ್ಕೆ, ಪ್ರತಿಭಾ ಶಕ್ತಿಗೆ, ಪಾಂಡಿತ್ಯಕ್ಕೆ ಅನಂತ ಸಾಕ್ಷಿ ಎಂಬಂತೆ 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯ ಅವತಾರವೆತ್ತಿದೆ. ಅಂದಿನ ಜನಮನಕ್ಕೆ ತಕ್ಕಂತೆ ವಾಲ್ಮೀಕಿ ರಾಮಾಯಣ ಮೂಡಿ ಇಂದಿನ ಜನಮನದ ಅಭೀಪ್ಸೆಗೆ ಅನುಗುಣವಾಗಿ ಶ್ರೀರಾಮನನ್ನು ಧರೆಗೆಳೆತಂದಂತೆ ಶ್ರೀರಾಮಾಯಣ ದರ್ಶನಂ ಅವತಾರಕ್ಕೆ ಕಾರಣವಾಗಿದೆ. ಇದೊಂದು ಜಗದಾದ್ಯಂತ ವಿರಾಜಿಸುವ ಅನರ್ಘ್ಯರತ್ನ. ಈ ಮಹಾಕೃತಿಯು ಕುವೆಂಪು ಸೃಜಿಸಿದಂತೆ ಕನ್ನಡ ಜನತೆಯ ಜೀವನವನ್ನು ಉನ್ನತೀಕರಿಸಿದೆ.

ವ್ಯಾಧನಾದವನು ನಾರದನಿಂದ ಉಪದೇಶಿತನಾಗಿ ಘೋರ ತಪಸ್ಸಿನಿಂದ ವಲ್ಮೀಕಿ ಆವರಿಸಿ ಹೇಗೆ ವಾಲ್ಮೀಕಿ ಅವತರಿಸಿದನೋ ಅದೇ ರೀತಿ ಪುಟ್ಟಪ್ಪನವರು ಅಂತರ್ಮುಖ

ಜೀವನ ನೀರವತೆ, ನಿರ್ಜನತೆಯನ್ನು ಬಯಸಿ, ಬಾಹ್ಯ ಜೀವನ ನೀಡುವ ಲೌಕಿಕ ಸುಖವನ್ನು ಅಲ್ಲಗಳೆದು ಸತತ ಒಂಬತ್ತು ವರ್ಷಗಳ ಕಾಲ ಏಕಾಂತವೆಂಬ ಹುತ್ತದಲ್ಲಿ ಅಡಗಿ ಕುಳಿತಿರದಿದ್ದರೆ ಈ ಸರ್ವೋತ್ಕೃಷ್ಟ ಕೃತಿ ರತ್ನ ನಾಡಿಗೆ ದೊರೆಯುತ್ತಿರಲಿಲ್ಲ. ಪುಟ್ಟಪ್ಪನವರಿಗೆ ಗುಂಪು, ಗಲಾಟೆಗಳೆಂದರೆ ಸ್ವಲ್ಪವೂ ಸರಿಕಾಣದು. ಏಕೆಂದರೆ ಅವರ ದೃಷ್ಟಿಯಲ್ಲಿ ಗುಂಪುಗದ್ದಲಗಳಿಂದ ಯಾವುದೇ ವ್ಯಕ್ತಿಗೆ ಮುಕ್ತಿ ಇಲ್ಲ. ಹಾಗೆಂದ ಮಾತ್ರಕ್ಕೆ ಅವರು ಸಮಾಜದಲ್ಲಿ ನಿರ್ಲಿಪ್ತರಂತಿದ್ದರೂ ಸಮಾಜದ ಆಗು ಹೋಗಿಗೆ ಸ್ಪಂದಿಸಿಲ್ಲವೆಂದಲ್ಲ. ಅವರು ಸೂಕ್ಷ್ಮಮತಿ, ಲೋಕ ಕಲ್ಯಾಣ ಅವರ ಸಾಧನೆಯ ಮುಖ್ಯ ಗುರಿಯಂತಿತ್ತು. ಕುವೆಂಪು ಅವರಿಂದ ಕನ್ನಡ ಭಾಷೆ ಮತ್ತು ಸಾಹಿತ್ಯ ವಿಶ್ವದಲ್ಲಿ ಉನ್ನತ ಸ್ಥಾನವನ್ನು ಪಡಿದುಕೊಂಡಿವೆ.

'ರಾಮಾಯಣ ದರ್ಶನಂ'ನಂಥ ಬೃಹತ್ಕಾವ್ಯ ಯುಗಕ್ಕೊಮ್ಮೆ ಅವತಾರ ಪಡೆಯುತ್ತದೆ. ಲೋಕೋತ್ತರವಾದ ಈ ಮಹಾಕಾವ್ಯ ಬಹುಮಾನ್ಯ ವಸ್ತುವನ್ನು, ತತ್ವಾಲೋಚನೆಗಳನ್ನು ಪಡೆದು ಮೂಡಿದುದಲ್ಲದೆ ಕಾವ್ಯದ ಓಟಕ್ಕೆ ಅನುಗುಣವಾಗಿ ಛಂದಸ್ಸು ತಾನಾಗಿಯೇ ಒಡಮೂಡಿದಂತಿದೆ. ಷಟ್ಪದಿ, ಕಂದ, ವೃತಗಳೇ ಮೊದಲಾದ ಪ್ರಾಚೀನ ಛಂದಸ್ಸಿನ ಜೊತೆಗೆ ಆಧುನಿಕ ಛಂದಸ್ಸಿನ ವಿವಿಧ ರೀತಿಯ ಛಂದೋಲಯಗಳನ್ನು ಒಳಗೊಂಡ ಮಹಾಛಂದಸ್ಸು ಕಾವ್ಯದುದ್ದಗಲಕ್ಕೂ ಮುನ್ನುಗ್ಗುತ್ತದೆ. ಕಾವ್ಯ ಯೋಜನೆ, ಪಾತ್ರ ಪೋಷಣೆ, ರಸ, ಧ್ವನಿ, ಮಹೋಪಮೆ, ಶಬ್ದಶಿಲ್ಪ ಒಂದೊಂದು ಒಂದಕ್ಕೆ ಪೂರಕವಾಗಿ ಮತ್ತೊಂದು ಮೂಡಿಬರುವುದರ ಮೂಲಕ ಕೃತಿಯನ್ನು ಓದುಗ ಒಂದೇ ಬಾರಿಗೆ ಮುಚ್ಚಿಡುವುದಿಲ್ಲ. ಮತ್ತೆ ಮತ್ತೆ ಓದಬೇಕೆಂಬಂತೆ ಗಹನವಾದ ವಿಚಾರ ಸರಣಿಯನ್ನು ವ್ಯಕ್ತಪಡಿಸುತ್ತದೆ.

ರಾಮಕಥೆ ಜನತೆಯಲ್ಲಿ ಹೆಚ್ಚು ಪರಿಣಾಮಕಾರಿಯಾಗಿ ಪ್ರಚಾರವಾದುದು ದೇಶ ಭಾಷೆಗಳ ಮೂಲಕವೇ ಎಂದು ಯಾವುದೇ ರೀತಿಯ ಅನುಮಾನವನ್ನು ಉಂಟು ಮಾಡಿಕೊಳ್ಳದೆ ಧಾರಳವಾಗಿ ಹೇಳಬಹುದು. ಸಂಸ್ಕೃತವು ಮೂಲಮೂರ್ತಿಯಾಗಿ ಇತರೆ ಭಾಷೆಗಳು ಉತ್ಸವಮೂರ್ತಿಗಳಾಗಿ ಪ್ರಸಾರವಾಯಿತು. ಆದರೆ ದೇಶ ಭಾಷೆಯಲ್ಲಿ ಉಂಟಾಗುವ ಪರಿಣಾಮ ಬೇರಾವ ಭಾಷೆಯಿಂದಲ್ಲವೆಂಬ ಅರಿವು ಮೂಡಿ, ರಾಮಾಯಣ ಸಂಬಂಧವಾದ ಕಾವ್ಯಗಳು ಹೆಚ್ಚು ಸಂಖ್ಯೆಯಲ್ಲಿ ರಚಿತವಾದವು. ಅಂತಹ ದೇಶ ಭಾಷೆಯಲ್ಲಿ ರಚಿತವಾದ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದ ವಸ್ತುವಿಷಯವೋ ತೀರ ಹಳೆಯದು. ಜಗದಗಲಕ್ಕೂ ಅನೇಕ ಧರ್ಮಗಳಲ್ಲಿ, ಅನೇಕ ಭಾಷೆಗಳಲ್ಲಿ ಪ್ರಚಲಿತದಲ್ಲಿರುವಂತದ್ದು. ದಶರಥನ ರಾಜ್ಯದ ವೈಭವ, ದಶರಥನ ಕೊರಗು, ಪುತ್ರಕಾಮೇಷ್ಠಿಯಾಗ, ಪುತ್ರ ರತ್ನಗಳ ಜನನ, ಕೈಕೆ ಮತ್ತು ಮಂಥರೆಯ ಕಾರಣವಾಗಿ

ವನವಾಸ, ಸೀತಾಪಹರಣ, ಲಂಕಾದಹನ, ಶ್ರೀರಾಮನಿಂದ ರಾವಣ ಮರಣವನಪ್ಪಿದ ಕಥೆ. ಇನ್ನೂ ಮುಂದುವರಿದು ಪಾತ್ರಗಳೂ ಸಹ ಅವವೇ, ಅದೇ ದಶರಥ, ಅದೇ ಕೈಕೆ, ಅದೇ ರಾಮ, ಅದೇ ಸೀತೆ, ಅದೇ ಜನಕ, ಅದೇ ಭರತ ಶತ್ರುಜ್ಞರು, ಅದೇ ರಾವಣ. ಆದರೆ ಓದುಗ ಕೃತಿಯನ್ನು ಮನನ ಮಾಡಿಕೊಳ್ಳುತ್ತಾ ಸಾಗಿದರೆ ಅರಿವಿಗೆ ಬರುತ್ತದೆ. ಮಮತೆಯ ಸುಳಿಯಲ್ಲಿ ಸಿಲುಕಿದ ಮಂಥರೆ, ರಾಮಪಾದಸ್ಪರ್ಶಕ್ಕಾಗಿ ಕಾಯ್ದೊರಗಿದ್ದ ಅಹಲ್ಯೆಯ ಉದ್ಧಾರ, ರಾಮನಿಗಾಗಿ ಪ್ರಲಾಪಿಸುವ ದಶರಥ ಮಹಾರಾಜ, ಸೀತಾಪಹರಣ, ವಾಲಿಯ ಸಂಹಾರ, ರಾಣನ ಉದ್ಧಾರದ ಪ್ರಸಂಗಗಳು ಮೂಲ ವಾಲ್ಮೀಕಿ ರಾಮಾಯಣದಿಂದ ಭಿನ್ನವಾದ ಈ ಪ್ರಸಂಗಗಳು ಸಾದೃಶ್ಯದಂತೆ ಕಾಣುವ ವೈದೃಶ್ಯಗಳು. ದೈವೇಚ್ಛೆ ಮೂರ್ತಿ ಪಡೆದಂತೆ, ಮನುಷ್ಯನ ತಪಸ್ಸಿನ ಪ್ರಭಾವವು ಮೈಗೂಡಿದಂತೆ, ಯುಗ ಶಕ್ತಿಯು ರೂಪ ಪಡೆದಂತೆ ಈ ಮಹಾಕಾವ್ಯ ಕನ್ನಡ ಸಾಹಿತ್ಯ ಲೋಕಕ್ಕೆ ಮೇರು ಕೃತಿಯಾಗಿ ಅವತಾರವನ್ನು ಪಡೆದುಕೊಂಡಿದೆ. ಈ ಮಹಾ ಕಾವ್ಯದಲ್ಲಿ ಆದರ್ಶ ವಾಸ್ತವತೆಗಳ ಹೊಂದಾಣಿಕೆಯಿದೆ. ನರತ್ವ, ಅಮರತ್ವಗಳ ಸುಮಧುರವಾದ ಮಿತ್ರತ್ವವಿದೆ. ಪ್ರಚಂಡ ಶಕ್ತಿಗಳ ಹೋರಾಟದ ನಡುವೆಯೂ ಅನ್ಯೋನ್ಯ ದಾಂಪತ್ಯ, ಸಹೋದರ ವಾತ್ಸಲ್ಯ, ನಿಸ್ವಾರ್ಥತೆ, ಕರ್ತವ್ಯ ನಿಷ್ಠೆ, ಗೃಹಸ್ಥ ಧರ್ಮ ಇಂತಹ ಮೊದಲಾದ ದೈವೀಗುಣಗಳು ವ್ಯಕ್ತಗೊಂಡು, ಸರ್ವಯೋಗಗಳ, ಸರ್ವಮತಗಳ ಸರ್ವತತ್ವ, ಸರ್ವಧರ್ಮಗಳ ಸಮನ್ವಯವಿದೆ.

**"ಪಂಜರದ ಪಳಮೆಯೊಳ್ ಪ್ರಾಣನವ ಪಕ್ಷಿಯಂ**

**ವಿಗ್ರಹಕೆ ದೇವತಾವಾಹನಂ ಗೆಯ್ವವೋಲ್"[೮]**

ಕುವೆಂಪು ಅವರ ರಾಮಾಯಣ ದರ್ಶನಂ ಕೃತಿಗೆ ವಾಲ್ಮೀಕಿಯ ಕವಿಕೃತಿಯೆ ಮೂಲ; ಆ ಪರಿವರ್ತನಾ ಸಮರ್ಥವಾದ ಸಾರಥಿ ಶಕ್ತಿಯೇ ಪ್ರೇರಕಶಕ್ತಿ. ಇದು ಪೂರ್ಣ ಕಲ್ಪನಾಕೃತಿ ಕಡೆದು ರೂಪಿಸಿರುವ ಶಿಲ್ಪಾಕೃತಿ, ಕಾವ್ಯದ ಒಟ್ಟು ಧೋರಣೆಯು ಹಳೆಗನ್ನಡದ್ದಾದರೂ ಬಳಕೆಯಾಗಿರುವ ಭಾಷೆ ನಡುಗನ್ನಡ ಹಾಗೂ ಹೊಸಗನ್ನಡ ಮಿಶ್ರಣದಿಂದ ಕಾವ್ಯದ ವಸ್ತು ಆಕರ್ಷಕವೂ, ಉದಾತ್ತತೆಯೂ ಸಿದ್ಧವಾಗಿದೆ. ಕವಿಯು ಭಾರತೀಯ ಆಧುನಿಕ ಮಹಾಕಾವ್ಯಗಳಂತೆ ಕಾವ್ಯದ ವಸ್ತು ಪ್ರಾಚೀನ ಮೂಲವಾದರೂ, ಪೌರಾಣಿಕತೆಯ ಉಡುಪನ್ನು ಕಳಚಿ ಅದರಲ್ಲಿನ ಆಧ್ಯಾತ್ಮಿಕ ಶ್ರದ್ಧೆಯ ಸಾಧನೆಯ ತಿರುಳನ್ನು ಮಾತ್ರ ಗಮನದಲ್ಲಿಟ್ಟುಕೊಂಡಿರುವುದನ್ನು ಮಹಾಕಾವ್ಯದುದ್ದಕ್ಕೂ ಬಹುಮುಖ್ಯವಾಗಿ ಗಮನಿಸಬಹುದು.

---

೮. ಕುವೆಂಪು, ಶ್ರೀ ರಾಮಾಯಣದರ್ಶನಂ, ಪುಟ–೬

ರಾಮಾಯಣದರ್ಶನಂ ಅದರ ಮೂಲವಾದ ರಾಮಾಯಣದ ಹಾಗೆಯೇ ಒಂದು ಕಥೆಯಾದರೂ, ಆ ಕಥೆಗಳು ನಾವು ತಿಳಿದಂತೆ ಅವು ಸಾಮಾನ್ಯ ಅರ್ಥದ ಕತೆಗಳಂತು ಅಲ್ಲವೇ ಅಲ್ಲ. ಇದು ಭಾರತೀಯ ಆಧುನಿಕ ಜನಜೀವನದ ಪರಂಪರೆಯ ನೈಸರ್ಗಿಕ ನೈಜ ನಿರೂಪಣೆಯಾಗಿದೆ. ಅಷ್ಟೇ ಅಲ್ಲದೆ ಇದೊಂದು ಸಾಂಸ್ಕೃತಿಕ ಚಿತ್ರ ಅಥವಾ ದೃಶ್ಯಮಾಲೆಯಾಗಿ ಕಾವ್ಯ ಜಗತ್ತಿನಲ್ಲಿ ಮಿರುಗುತ್ತದೆ. ಇಲ್ಲಿನ ಕಥೆಗಿಂತಲೂ, ಪಾತ್ರಗಳು ಆ ಪಾತ್ರಗಳಿಗಿಂತಲೂ ಅವುಗಳು ಪ್ರತಿಮಿಸುವ ಆದರ್ಶಗಳೂ ಮೌಲ್ಯಗಳು, ಅವುಗಳು ಅಭಿವ್ಯಕ್ತಪಡಿಸುವ ಸಂದೇಶ ಉಪದೇಶಗಳೂ ಹೆಚ್ಚೆಚ್ಚು ಪ್ರಸ್ತುತತೆಯನ್ನು ಹೊಂದಿ ತನ್ನ ಉದ್ದೇಶವನ್ನು ವಿಶದಪಡಿಸುತ್ತದೆ.

ಮಹಾಕವಿ ಕುವೆಂಪು ಪಾಶ್ಚಾತ್ಯ ಮಹಾಕವಿಗಳು, ನಾಟಕಕಾರರು ಹಾಗೂ ನಮ್ಮವರೇ ಆದ ವ್ಯಾಸ, ವಾಲ್ಮೀಕಿಗಳು, ಭಾಸ, ಕಾಳಿದಾಸರು, ಪಂಪ–ರನ್ನರು, ರಾಘವಾಂಕ–ಕುಮಾರವ್ಯಾಸರು, ನಾಗಚಂದ್ರ–ಕುಮಾರ ವಾಲ್ಮೀಕಿ, ವರ್ಡ್ಸ್‌ವರ್ತ್–ಷೆಲ್ಲಿ, ಮಿಲ್ಟನ್–ಷೇಕ್ಸ್‌ಪಿಯರ್‌ಗಳು ರಚಿಸಿದ ಕೃತಿಗಳ ಅಂತಃಸಾರವನ್ನು ಚೆನ್ನಾಗಿ ಕರಗತ ಮಾಡಿಕೊಂಡಿದ್ದ ಇವರು ಅಲ್ಲಿಂದ ಅರಗಿಸಿಕೊಂಡ ಉತ್ತಮೋತ್ತಮ ಅಂಶಗಳನ್ನು ಅಪ್ರಯತ್ನಪೂರ್ವಕವಾಗಿ ಎನ್ನುವಂತೆ, ರಾಸಾಯನಿಕವಾಗಿ ಸಂಯೋಜಿಸುವ, ಒಂದು ಅಪರೂಪದ ಕವಿ ಕೌಶಲವು ಕುವೆಂಪುರವರಿಗೆ ಸಿದ್ಧಸಿತ್ತು ಎನ್ನುವುದನ್ನು ಅವರ ಹಿಂದಿನ ಸಾಹಿತ್ಯಗಳಲ್ಲಿಯೂ ಗಮನಿಸಬಹುದು. ಆದರೆ 'ರಾಮಾಯಣ ದರ್ಶನಂ' ಕೃತಿಯಲ್ಲಿ ಅದರ ಸಿದ್ಧಿ ಹೆಚ್ಚು ಮನಗಾಣಿಸುತ್ತದೆ.

ಮೂಲ ರಾಮಾಯಣದ ಕಥೆಯನ್ನು ಕವಿ ಕುವೆಂಪು ಯಥೋಚಿತವಾಗಿ ಪರಿಮಿತಿಗೆ ಕುಗ್ಗಿಸಿ, ಮುಖ್ಯ ಘಟನೆಗಳ ಹೆದ್ದಾರಿಯಲ್ಲಿ ಸಾಗ ಹೊರಟಿದ್ದಾರೆ. ದುಃಖವೋ, ರಾಗ ಮೋಹಗಳೋ, ಕ್ರೋಧಾಮರ್ಷಗಳೋ ವ್ಯಕ್ತಿ ಚರ್ಯೆಗಳ ವಿವಿಧ ಭಾವಗಳ ಅಭಿವ್ಯಕ್ತಿಯಲ್ಲಿ ಪ್ರಮುಖವಾಗಿ ವಿಚಾರಗಳನ್ನು ಮಾತ್ರ ಉಳಿಸಿಕೊಂಡು, ನೀತಿ ವಾಕ್ಯಗಳು, ಸಂದೇಶ ಉಪದೇಶಗಳನ್ನು ಸಂಗ್ರಹಿಸಿ ಪ್ರಕರ್ಷತೆಗೆ ಕೊಂಡೊಯ್ಯಲು ದುಡಿದಿದ್ದಾರೆ ಆಧುನಿಕತೆಯ ಲೇಪನವನ್ನು ನೀಡಿ ಸೊಗಸಾಗಿ ಅಯೋಧ್ಯಾ ಸಂಪುಟ, ಕಿಷ್ಕಂಧಾ ಸಂಪುಟ, ಲಂಕಾ ಸಂಪುಟ ಮತ್ತು ಶ್ರೀ ಸಂಪುಟವೆಂಬ ನಾಲ್ಕು ಪ್ರಧಾನ ಸಂಪುಟಗಳ ಮೂಲಕ ವರ್ಣಿಸಿದ್ದಾರೆ.

ರಾಮಾಯಣದರ್ಶನಂನಲ್ಲಿ ಸರ್ವೋತ್ಕೃಷ್ಟವಾದ ಹೃದಯಸ್ಥಾನ ಎಂದು ಹೇಳಬಹುದಾದ ಬಹುಪ್ರಧಾನ ಪಾತ್ರ ಶ್ರೀರಾಮಚಂದ್ರನದು. ರಾಮ ದಶರಥನ ಮಗನಾದರೂ ಆತ ಪುರುಷೋತ್ತಮ. ರಾವಣನಂತಹ ದುಷ್ಟರನ್ನು ಸಂಹರಿಸುವ ಸಲುವಾಗಿ ಮೂಡಿ ಬಂದ ಮಹಾವಿಷ್ಣುವಿನ ಅವತಾರಿ, ಅಪ್ರಾಕೃತ ಮಹಿಮೆಯುಳ್ಳವನು.

ತಾನೆಷ್ಟೇ ಮೇಲಿದ್ದರೂ ಎಲ್ಲರೊಡನೆ ಬೆರೆತು ಜನಾನುರಾಗಿಯಾಗಿ ತನ್ನ ಜೀವನ ವ್ಯಾಪಾರವನ್ನು ನಿರ್ವಹಿಸುತ್ತಾ, ಸುಖದುಃಖಗಳನ್ನು ಎದುರಿಸಿ ಸ್ಥೈರ್ಯದಿಂದ ಅವುಗಳನ್ನು ಮೀರುವುದು ಸಾಧ್ಯವಿದೆ ಎಂದು ತೋರಿಸಿಕೊಟ್ಟ ಮಹಾನ್ ಸಾಧಕ. ಈ ಪಾತ್ರವನ್ನು ಮೂಲ ರಾಮಾಯಣದ ರೂಪದಲ್ಲಿಯೇ ಪಡೆದು ಪರಿಸ್ಫುಟಗೊಳಿಸುವಲ್ಲಿ ಕುವೆಂಪು ಯಶಸ್ವಿಯಾಗಿದ್ದಾರೆ.

ರಾವಣನ ಪಾತ್ರ ಪೋಷಣೆಯಲ್ಲಿ ವಾಲ್ಮೀಕಿ ರಾಮಾಯಣ ಹಾಗೂ ಜೈನ ರಾಮಾಯಣದ ಪ್ರೇರಣೆ, ಪ್ರಭಾಗಳನ್ನು ಗುರುತಿಸಲು ಸಾಧ್ಯವಿದೆ. ವಾಲ್ಮೀಕಿ ರಾವಣನ ಪಾತ್ರವನ್ನು ದುಷ್ಟಪಾತ್ರವಾಗಿ ಚಿತ್ರಿಸಿದರೂ ಕುವೆಂಪು ಅವೆಲ್ಲ ದುಷ್ಟತೆಗೆ ಅವನಲ್ಲಿ ಮನೆಮಾಡಿದ್ದ ಅಷ್ಟಮದಗಳ ಉಲ್ಬಣ, ಉದ್ರೇಕಗಳೇ ಕಾರಣವೆಂದು ಆತನ ಸುದೀರ್ಘವಾದ ಬದುಕಿನಲ್ಲಿ ಮೆರೆದ ಗುಣವಿಶೇಷಗಳನ್ನು ಮುಂದೆ ಮಾಡಿದ್ದಾರೆ. ಆತನಲ್ಲಿದ್ದ ಆಪ್ತಜನವತ್ಸಲತೆ, ರೂಪಸೌಂದರ್ಯ, ಗುಣಗಳಲ್ಲಿ ಗೌರವ ಬುದ್ಧಿ, ಪಾಪಲೇಪದ ಬಗ್ಗೆ ತನ್ನಲ್ಲೆ ಜುಗುಪ್ಸೆ ಪಡುವ ಆತ್ಮ ಪರಿಶೋಧನೆ, ನಿಷ್ಕಪಟ ಶಿವಭಕ್ತಿ, ಪ್ರಜೆಗಳ ಕ್ಷೇಮಕಾತರತೆ, ಧೈರ್ಯಸ್ಥೈರ್ಯಗಳು, ಶೌರ್ಯಪ್ರತಾಪಗಳು ಹೀಗೆ ಅವನ ಮಹೋನ್ನತ ಗುಣಗಳನ್ನು ರಾಮಾಯಣದರ್ಶನಂನಲ್ಲಿ ಗುರುತಿಸಬಹುದು. ಪರಸ್ತ್ರೀ ವ್ಯಾಮೋಹವೆನ್ನುವ ಒಂದು ಘೋರ ಮಾನವ ದೌರ್ಬಲ್ಯ ಕಾರಣವಾಗಿ ರಾವಣ ಬಹುಕಾಲದವರೆಗೆ ಮನಸ್ಸಿನ ಕೆಟ್ಟ ಹಠದಿಂದ ಮನಸ್ಸನ್ನು ಕಲುಷಿತಮಾಡಿಕೊಂಡ ಅನೇಕ ಕೇಡುಗಳನ್ನೇ ಕಂಡುಂಡ. ಆತನ ಪಶ್ಚಾತ್ತಾಪದಿಂದ ದೌರ್ಬಲ್ಯಗಳು, ದೋಷಗಳು ಸುಟ್ಟುಹೋದವು. ಪಾತಿವ್ರತ್ಯದಲ್ಲಿ ಅನುಮಾನವಿದ್ದ ರಾವಣ ಸೀತೆಯ ಮೂಲಕ ಪಾತಿವ್ರತ್ಯದ ಮಹಿಮೆಯನ್ನು ಕಂಡು ಧನ್ಯತೆಯ ಭಾವವನ್ನು ಹೊಂದಿದನು. ಸೀತೆಯನ್ನು ತಾಯಿ ಎಂದು ಒಪ್ಪಿಕೊಂಡನು, ಯುದ್ಧಾನಂತರ ಸೀತೆಯನ್ನು ರಾಮನಿಗೆ ಒಪ್ಪಿಸುವುದಾಗಿ, ಕ್ಷಮೆ ಕೇಳುವುದಾಗಿ ಧೀರ, ಉದಾತ್ತ, ಸಂಕಲ್ಪವನ್ನು ಮಾಡಿಕೊಂಡನು. ಆದರೆ ಪಾಪದ ನಿಷ್ಕೃತಿಗೆ ಲೌಕಿಕದ ರೀತಿಯಲ್ಲಿ ಆ ಶಿಕ್ಷೆ ವಿಧಿಯ ಸಂಕಲ್ಪದಂತೆ ನಡೆಯುವುದು ಅನಿವಾರ್ಯವಿದ್ದ ಕಾರಣದಿಂದ ರಾಮನಿಂದ ಸಂಹಾರವಾಗವುದು ಖಚಿತವಾಯಿತು. ಇಲ್ಲಿ ರಾಮ ರಾವಣರೆಂಬ ವ್ಯಕ್ತಿಗಳು ನಿಜವಾಗಿ ಎರಡು ವ್ಯಕ್ತಿಗಳಲ್ಲ, ಎರಡು ಸತ್ವಗಳು, ಎರಡು ಲೀಲಾರೂಪಗಳು.

ಇನ್ನು ಸೀತೆ ರಾಮಸತ್ವದ ಪ್ರಕೃತಿಮುಖವೆನ್ನಬಹುದಾದ ಈಕೆ ರಾಮನ ರೀತಿಯಲ್ಲಿಯೇ ಅನೇಕ ಕಷ್ಟ ಪರಂಪರೆಗಳನ್ನು ಅನುಭವಿಸಿ, ಚಾಂಚಲ್ಯ, ವೈಕಲ್ಯಗಳನ್ನು ಎದುರಿಸಿದ್ಧವಳು. ಸೀತೆಯೂ ಸಹ ಅಪ್ರಾಕೃತಜನ್ಮಳೇ, ಮಹಿಮಾನ್ವಿತಳೇ, ಲೋಕಕಲ್ಯಾಣಾರ್ಥವಾಗಿ ರಾಮನಂತೆ ನರತನುವನ್ನು ಆಶ್ರಯಿಸಿ ಲೋಕದ ಕಷ್ಟ

ಸುಖಿಗಳನ್ನು ಸಾಮಾನ್ಯ ಹೆಣ್ಣಂತೆ ಅನುಭವಿಸಿದವಳು. ಸೀತೆ ಭಾರತೀಯ ಸ್ತ್ರೀತ್ವದ ಸಕಲ ಆದರ್ಶಗಳ ಪ್ರತೀಕವಾಗಿ ನಿಲ್ಲುತ್ತಾಳೆ. ರಾವಣನನ್ನು ತನ್ನಿಂದಲೇ ನಿಗ್ರಹಿಸುವ ಸಾಮರ್ಥ್ಯವಿದ್ದರೂ ಅವನ ಆತ್ಮ ವಿಕಾಸವನ್ನು ಹದಗೊಳಿಸಬೇಕೆಂದೇ, ರಾವಣನಿಗೆ ಸ್ವತಃ ಜ್ಞಾನೋದಯವಾಗಲೆಂದೇ ಆಕೆ ಅವನನ್ನು ಸಂಹರಿಸೆ ತಾಯಿಯ ಸ್ಥಾನದಲ್ಲಿ ನಿಂತು ಆತನಿಗೆ ಬುದ್ಧಿ ಕಲಿಸಿದಳು; ಆಕೆ ನೀಡಿದ ಬುದ್ಧಿಯಿಂದಲೇ ರಾವಣ ಸೀತೆಯಲ್ಲಿ ತಾಯ್ತನವನ್ನು ಕಾಣುತ್ತಾನೆ. ಕುವೆಂಪು ಸಾಮಾನ್ಯವಾದ ಪಾತ್ರಗಳಲ್ಲೂ ಅಸಾಮಾನ್ಯತೆಯನ್ನು ತುಂಬುವುದಲ್ಲದೆ, ರಾಕ್ಷಸ ಪಾತ್ರಗಳೂ ಸಹ ನಯರುಚಿಯ ಸುಸಂಸ್ಕೃತ ಪಾತ್ರಗಳಾಗುವಂತೆ ಕಥೆಯ ಹಂದರವನ್ನು ಅಚ್ಚುಕಟ್ಟಾಗಿ ನೆಯ್ದಿದ್ದಾರೆ. ಸ್ತ್ರೀ ಪಾತ್ರಗಳಲ್ಲಿ ಮಂಥರೆ, ಶಬರಿ, ಮಂಡೋದರಿ, ಊರ್ಮಿಳೆ, ಕೈಕೆ, ದಾನ್ಯಮಾಲಿನಿ, ತಾರಾಕ್ಷಿ, ಅನಲೆ, ಚಂದ್ರನಖಿ, ತ್ರಿಜಟೆ ಈ ಪಾತ್ರಗಳನ್ನು ಬಹು ಮುಖ್ಯ ಮಾತ್ರವಾಗಿ ಸೃಷ್ಟಿಸುವ ಮೂಲಕ ವಾಲ್ಮೀಕಿ ಕಾವ್ಯಕ್ಕಿಂತ ಹೆಚ್ಚು ಗಮನಾರ್ಹವಾಗುವಂತೆ ಬೆಳಗಿದ್ದಾರೆ.

ಮಂಥರೆ ವಾಲ್ಮೀಕಿಯಲ್ಲಿ ದುಷ್ಟೆ, ಪಾಪಕೃತ್ಯವನ್ನು ಬೋಧಿಸುವಾಕೆ ಎಂದು ಪರಿಚಯಿಸಿದರೆ, ಕುಮಾರ ವಾಲ್ಮೀಕಿ ಈ ಪಾತ್ರಕ್ಕೆ ಪರಿವರ್ತನೆ ಮಾಡುವ ಮನಸ್ಸು ಮಾಡಿದ್ದಾನೆ. ಇದೇ ಪಾತ್ರ ರಾಮಾಯಣ ದರ್ಶನಂ ಕಾವ್ಯದಲ್ಲಿ

**"ಭೋಂಕನೆಯೆ ಮಂಥರೆಯ ಮಮತೆಯ ಸುಳಿಗೆ ಸಿಲ್ಕಿ**
**ರಸದೋಡಮಲ್ಲುದಯ್ ಸುಖನೌಕೆ ಮುಳುಗಲಾ**
**ನೌಕೆಯಂ ಮುಳುಗಿಸಿದ ಸುಳಿಯೆ ಸುಟ್ಟುರೆಯಾಗಿ**
**ತಿರ್‍ರನೆ ತಿರುಪಿ ಬಾನ್ಗೆ ಬೀಸಿದುದು ಸುಖಿಗಳಂ"[೯]**

ಎನ್ನುವಂತೆ ಮಮತೆಯ ಸುಳಿಯಲ್ಲಿ ತಾನು ತಿರ್‍ರನೆ ತಿರುಗಿ ಇಡೀ ರಾಮಾಯಣದ ಕಥೆಯನ್ನೇ ತಿರುಗಿಸಿಬಿಟ್ಟಿದ್ದಾಳೆ. ಜಗತ್ತಿನ ಎಲ್ಲಾ ಮಹಾಕಾವ್ಯಗಳೂ ಅಸೂಯೆ ಮತ್ತು ಮಮಕಾರಗಳ ಸುಳಿಯಲ್ಲಿ ಸಿಕ್ಕೆ ಬೆಳೆದಿವೆ ಎನ್ನುವುದನ್ನು ಸ್ಮರಿಸಬೇಕು. ಆರಂಭದಲ್ಲಿ ಅಪಮಾನಗಳಿಂದ, ಅಸಹನೆಗೊಂಡು ಸ್ನೇಹ ಜಜ್ಜರಿಗೊಂಡು ತುಳಿದ ಹಾವಿನಂತೆ ರೋಷಾವೇಶಕ್ಕೆ ತಿರುಗುತ್ತಾಳೆ. ಆದರೆ ಇದೇ ಮಂಥರೆ ಭರತನಿಗಾಗಿ ಭರತನಣ್ಣಯ್ಯನನ್ನು ಹುಡುಕಿಕೊಂಡು ಕಾಡಿಗೆ ಹೋಗುತ್ತಾಳೆ. ರಾಮನನ್ನು ಹಂಬಲಿಸುತ್ತ, ಹಂಬಲಿಸುತ್ತಾ ಕಾಡಿನ ಬೆಂಕಿಗೆ ಆಹುತಿಯಾಗಿ ಕರಗಿ ಕರ್ಪೂರವಾದ ದಾರುಣ ಕಥೆ ಸಹೃದಯನ ಮನದಲ್ಲಿ ಸದಾ ಚಿರಸ್ಥಾಯಿಯಾಗಿ ನಿಲ್ಲುತ್ತದೆ. ಶಬರಿಯ ಪಾತ್ರವಂತು ಆತ್ಮಸಮರ್ಪಣದ ಅತಿ ಉನ್ನತ ಘಟ್ಟದಲ್ಲಿ ನಾವು ಕಾಣಬಹುದು. ಊರ್ಮಿಳೆಯ ಪಾತ್ರದ ಮೇಲಂತು ಕುವೆಂಪುವಿಗೆ ವಿಶೇಷ ಆಸಕ್ತಿ ಇದೆ. ಮೂಲ ರಾಮಾಯಣದಲ್ಲಿ ಲಕ್ಷ್ಮಣ ಹೆಂಡತಿ

---

೯. ಕುವೆಂಪು. ಶ್ರೀ ರಾಮಾಯಣದರ್ಶನಂ. ಪುಟ-೫೮

ಅನಾದರಕ್ಕೆ ತುತ್ತಾದವಳು. ಆದರೆ ಇಲ್ಲಿ ಕವಿಗೆ ಆಕೆಯ ಬಗ್ಗೆ ಗೌರವ, ಮರುಕ, ಈಕೆ ನೀರವ ಧ್ಯಾನವಧು, ಚಿರತಪಸ್ವಿನಿಯಾಗಿ ನಿಂತು ವನವಾಸಿಗಳ ಸುಖಾಗಮನಕ್ಕಾಗಿ ಕಾಯ್ದು ನಿಂತವಳು. ಈಕೆ ಅನುಭವಿಸಿದ ಬ್ರಹ್ಮಚರ್ಯ ತಪಸ್ಸೇ ಸರಿ. ಅದಕ್ಕಾಗಿಯೇ ಈಕೆಯನ್ನು ಕುವೆಂಪು ಶೀಲಾತಪಸ್ವಿನಿ ಎಂದಿದ್ದಾರೆ.

> **"ಇಂದ್ರನಳುಪಿಂಗಳ್ಕಿ ಪತಿಯ ಶಾಪಕ್ಕೆ ಸಿಲ್ಕಿ ಕಲ್ಲಾದಹಲ್ಯೆಯಂ**
> **ಸಿರಿಯಡಿಯ ಸೋಂಕಿಂದೆ ಮರಳಿ ಮಾಡಿದ ರಾಮೋತ್ತಮಾಂಗ"**[೧೦]

ಗೌತಮನ ಶಾಪಕ್ಕೆ ಗುರಿಯಾಗಿ ಕಲ್ಲಾದ ಅಹಲ್ಯೆಯ ಉದ್ಧಾರ ರಾಮ ಪಾದ ಸ್ಪರ್ಶದಿಂದ ಸಾಧ್ಯವೆಂದು, ಪಾಪಫಲವು ನಿರಂತರ ಕಾಯುವಿಕೆ ಮತ್ತು ದೇವ ಕೃಪೆ ಸೇರಿದರೆ ಮಾತ್ರ ಸಾಧ್ಯವೆನ್ನುವುದನ್ನು ಸಾಕ್ಷಾತ್ಕಾರಗೊಳಿಸುತ್ತದೆ.

ಒಟ್ಟಾರೆಯಾಗಿ ರಮಾಯಣ ದರ್ಶನದ ಕಾವ್ಯದಲ್ಲಿ ವಾಲ್ಮೀಕಿ ರಾಮಾಯಣದ ಪಾತ್ರಗಳ ಐತಿಹಾಸಿಕ ಹಾಗೂ ಆದರ್ಶಗಳ ಸಹಜ ಸೃಷ್ಟಿಯನ್ನು ಕಾಲಗತಿಗೆ ಅನುಗುಣವಾಗಿ ಸಾಂಸ್ಕೃತಿಕ ಮೌಲ್ಯಗಳು, ಸಾಮಾಜಿಕ ನಡೆವಳಿಕೆಗಳು, ರೀತಿ ನೀತಿಗಳು ಹೊಂದಿಕೊಂಡು ಸಾಗಿ ಬೆಳೆದಿದೆ ಎಂಬುದು ಅಚ್ಚುಕಟ್ಟಾಗಿ ಮೂಡಿಬಂದಿದೆ.

ರಾಮಾಯಣ ಮಹಾಭಾರತಗಳು ಮೊಗೆದರೂ ಮುಗಿಯದ ಅಂಬುಧಿಗಳು, ಅದನ್ನು ಮೊಗೆದಷ್ಟೂ ಇನ್ನೂ ಪ್ರಖರಗೊಳ್ಳುತ್ತ ಹೋಗುತ್ತವೆ. ಈ ನಿಕ್ಷೇಪದಿಂದ ಯಾರೇ ಎಷ್ಟು ಬೇಕಾದರೂ ತೆಗೆದುಕೊಳ್ಳಬಹುದು. ಆದುದರಿಂದ ಕಾಲಗತಿಗೆ ಅನುಗುಣವಾಗಿ ಹೊಸರೂಪದಲ್ಲಿ, ಕವಿಯ ಕೌಶಲ್ಯಕ್ಕೆ ಅನುಗುಣವಾಗಿ ಮೂಡಿಬರುತ್ತಿದೆ. ಈ ಸಾಲಿನಲ್ಲಿ ಇಪ್ಪತ್ತೊಂದನೆಯ ಶತಮಾನದ ಕನ್ನಡದ ಮೊದಲ ಮಹಾಕಾವ್ಯವಾಗಿ ಎಂ. ವೀರಪ್ಪ ಮೊಯಿಲಿಯವರು 'ಶ್ರೀರಾಮಾಯಣ ಮಹಾನ್ವೇಷಣ'ವೆಂಬ ಕೃತಿರತ್ನವನ್ನು ರಚಿಸಿ ಕೃತಾರ್ಥರಾಗಿದ್ದಾರೆ. ಆಡಳಿತ ರೂಢವಾದ ನಾಡಿನಲ್ಲಿ ಅವರು ರಾಜಕೀಯ ಕ್ಷೇತ್ರದಲ್ಲಿ ತಮ್ಮನ್ನು ನಿಚ್ಚಳವಾಗಿ ತೊಡಗಿಸಿಕೊಂಡು ದೇಶಸೇವೆಗೆ ಮೀಸಲಿಟ್ಟುಕೊಂಡರು. ಆಧುನಿಕ ಜೀವನದಲ್ಲಿ ಜನತೆಗೆ ರಾಮರಾಜ್ಯವನ್ನು ದೊರಕಿಸಿಕೊಡಬೇಕಾದರೆ ಈಗಿನ ಜನನಾಯಕರು ಕಾರ್ಯಮುಖರಾಗಬೇಕು. ಅಂತಹ ವ್ಯಕ್ತಿಗಳ ಮೇಲೆ ರಾಮಾಯಣ, ಮಹಾಭಾರತ ಮಹಾಕಾವ್ಯಗಳು ಪ್ರಭಾವ ಬೀರಿರುತ್ತವೆ.

ಎಂ. ವೀರಪ್ಪ ಮೊಯಿಲಿಯವರ ಶ್ರೀರಾಮಾಯಣ ಮಹಾನ್ವೇಷಣೆ ಕನ್ನಡ ವಾಙ್ಮಯ ಲೋಕಕ್ಕೆ ಒಂದು ಅದ್ಭುತ ಕೊಡುಗೆಯಾಗಿದೆ. ಈ ಕಾವ್ಯದಲ್ಲಿ ವಾಲ್ಮೀಕಿ ರಾಮಾಯಣದಲ್ಲಿನ ಸೌಂದರ್ಯ, ರಸ ಅಚ್ಚಳಿಯದೆ ಮೌಲ್ಯದ ಜೊತೆಯಲ್ಲಿ ಪಕ್ವಗೊಂಡಿದೆ. ಒಡನೊಡನೆ ಧರ್ಮದ ವಿಷಯ, ಸಾಮಾಜಿಕ ಕಲ್ಪನೆ, ಮಾನವೀಯ ಮೌಲ್ಯಗಳ

---

೧೦. ಕುವೆಂಪು, ಶ್ರೀ ರಾಮಾಯಣದರ್ಶನಂ, ಪುಟ :೪೦-೪೧

ವಿಚಾರಗಳಲ್ಲಿ ಸಮಕಾಲೀನ ಪ್ರಜ್ಞೆಯನ್ನು ದುಡಿಸಿಕೊಂಡಿದ್ದಾರೆ. ಮೂಲ ಕಾವ್ಯದಲ್ಲಿ ರಾಮನ ತಮ್ಮನಾದ ಲಕ್ಷ್ಮಣ ಪಾತ್ರಕ್ಕೆ ಸರಿಯಾದ ನ್ಯಾಯ ಸಿಗಲಿಲ್ಲವೆಂಬ ದೃಷ್ಟಿಯಿಂದಲೋ ಏನೋ ಮೊಯಿಲಿಯವರು ತಮ್ಮ ಕಾವ್ಯದಲ್ಲಿ ಹೆಚ್ಚು ಒತ್ತು ನೀಡಿದ್ದಾರೆ. ಪ್ರತಿಯೊಂದು ಪ್ರಸಂಗದಲ್ಲೂ ಲಕ್ಷ್ಮಣ ಆಧುನಿಕ ಜೀವನದ ತನ್ನ ಚೈತನ್ಯವನ್ನು ದರ್ಶನ ಮಾಡಿಸುತ್ತಾನೆ. ರಾಮಾಯಣದ ಆದರ್ಶ ಪುರುಷನೊಬ್ಬನನ್ನು ಕಾವ್ಯದ ವಸ್ತುವಾಗಿರಿಸಿಕೊಂಡು ಧರ್ಮಶಾಸ್ತ್ರದ ಸೂಕ್ಷ್ಮ ವಿಚಾರಗಳನ್ನು, ನಿಷ್ಠೆ ನಿಯಮಗಳನ್ನು, ಕರ್ಮ ಸ್ವರೂಪವನ್ನು ಆಧುನಿಕ ಚಿಂತನೆಯೊಡನೆ ಇಂದಿನ ಭಾಷೆಯಲ್ಲಿ ಮೂಲ ರಾಮಾಯಣದ ಬಾಲಕಾಂಡ, ಅಯೋಧ್ಯಾಕಾಂಡ, ಅರಣ್ಯಕಾಂಡ, ಕಿಷ್ಕಿಂಧಾಕಾಂಡ, ಸುಂದರಕಾಂಡ, ಯುದ್ಧಕಾಂಡ ಹಾಗೂ ಉತ್ತರಕಾಂಡಗಳನ್ನು ಪಾಕ ಇಳಿಸಿದ್ದಾರೆ. ಅನೇಕ ಪಾತ್ರಗಳಿಗೆ ಹೊಸ ಆಯಾಮವನ್ನು ದೊರಕಿಸಿಕೊಡುವ ಪ್ರಯತ್ನವನ್ನು ಮಾಡಿದ್ದಾರೆ. ವಾಲ್ಮೀಕಿಯ ಕೃತಿಯಲ್ಲಿ ಮಿಂಚಿ ಮರೆಯಾಗುವ ಅಹಲ್ಯೆಯ ಪಾತ್ರದ ಮೂಲಕ

> “ಜ್ಞಾನದಾಹಿಯು ನೀವು ವಿದ್ವಜ್ಜನರ ತೊರೆದು ದೂರವಿರೆ,
> ಮರಳ ತಡಿಯಲಿ ಬಿದ್ದ ಮತ್ಸ್ಯದೊಲು ಪಡಪಡಿಸುವಿರಿ”[೧೧]

ಎಂಬ ಮಾತು ಬದುಕಿನ ನಿಷ್ಫಲವಾಗುವುದು. ಅಹಲ್ಯೆಯ ಪತನಕ್ಕೆ ಅವಳ ಮನದಾಳದಲ್ಲಿದ್ದ ಇಂದ್ರನ ವೈಭವದ ಬಯಕೆಯನ್ನು ಸೂಚಿಸುತ್ತಾ ಈ ಬೀಜವೇ ಮುಂದೆ ಅವಳಲ್ಲಿ ಹೆಮ್ಮರವಾಗಿ ಬೆಳೆದು ಅವಳ ಪತನಕ್ಕೆ ಕಾರಣವಾಯಿತು ಎಂದು ಸ್ಪಷ್ಟೀಕರಣ ನೀಡ ಹೊರಟಿದ್ದಾರೆ. ಇಂದಿನಿಂದ ಅಪಕೃತ್ಯ ಉಂಟಾಗಿದ್ದರೂ ಮೂಲದಂತೆ ಇಂದ್ರನಿಗೆ ಶಾಪ ನೀಡದೆ ಅಲ್ಲಿದ್ದ ತಪಸ್ವಿಗಳನ್ನು ಕುರಿತು ಹೇಳು ತಪಸ್ವಿಗಳೇ ಸಂತರೇ, ವಿದ್ವನ್ಮಣಿ, ಬ್ರಹ್ಮಋಷಿಗಳೆ ಎಂದು ನೆರೆದಿದ್ದ ಎಲ್ಲರನ್ನೂ ಕೇಳುತ್ತಾನೆ. ಎಲ್ಲರೂ ಏನೂ ಹೇಳದೆ ಚದುರಿಹೋದಾಗ ಸೂರ್ಯನಿಗೆ ಅರ್ಘ್ಯವನ್ನು ನೀಡಿ ಶಾಪವನ್ನು ನೀಡುತ್ತಾನೆ. ಈ ಕಾವ್ಯ ಮತ್ತೊಂದು ಮಹೋನ್ನತವಾದ ರಸಾಸ್ವಾದಕ್ಕೆ ಕಾರಣವಾದ ಘಟ್ಟ, ಸೀತಾಸ್ವಯಂವರದ ಮೂಲಕ ಅಯೋಧ್ಯೆ ಮತ್ತು ಮಿಥಿಲೆಯ ನಡುವೆ ಏರ್ಪಟ್ಟಿದ್ದ ವೈಮನಸ್ಯ ಮುರಿದು ಹೋಗಿ ಸ್ನೇಹಬಂಧ ಬೆಸೆಯುವಂತೆ ಮಾಡಿ ಮೊಯಿಲಿಯವರು ಕಾವ್ಯದಲ್ಲಿ ರಸವತ್ತಾಗಿ ಮೂಡಿಸಿದ್ದಾರೆ. ಇದು ಆಶ್ಚರ್ಯಪಡಬೇಕಾದ ಅಂಶವಾಗಿದೆ.

ಮಂಥರೆಯ ಚಾಡಿಕೋರತನದಿಂದ ಕೈಕೆ ವರಗಳನ್ನು ಬೇಡಿ ರಾಮ ವನವಾಸಕ್ಕೆ ತೆರಳುವಂತೆ ಮಾಡಿದ್ದಾಳೆ. ಕಾಡಿನಲ್ಲಿ ದೀನದಲಿತರಿಗೆ ರಾಮ, ಸೀತೆ, ಲಕ್ಷ್ಮಣರು ನೀಡಿದ ಪ್ರೇಮ, ಸ್ನೇಹ, ಸೌಜನ್ಯವನ್ನು ಶ್ರೀರಾಮಾಯಣ ಮಹಾದರ್ಶನದಲ್ಲಿ ಮೂಲಕ್ಕಿಂತ

---

೧೧. ಎಂ.ವಿ. ಮೊಯಲಿ. ಶ್ರೀ ರಾಮಾಯಣ ಮಹಾನ್ವೇಷಣಂ. ಪ್ರಥಮ ಸೋಪಾನ. ಪುಟ : ೧೮೬.

ವಿಸ್ತಾರವಾಗಿ ಚಿತ್ರಿಸಿದ್ದಾರೆ. ಇದು ಈ ಸಂದರ್ಭಕ್ಕೆ ಅತ್ಯಂತ ಸೂಕ್ತವೂ ಆಗಿದೆ. ಅತ್ರಿ ಅನಸೂಯೆಯರ ಮನೆಯಿಂದ ರಾಮ ಸೀತೆಯರು ಹೊರಡುವಾಗ

**"ಕೇಳು ಶ್ರೀರಾಮ**
**ಸಮಾಜದಲಿ ಸ್ತ್ರೀ ಶೋಷಿತಳು ಪೀಡಿತಳು,**
**ರಾಣಿಯಾಗಿರಲೇನು, ದಾಸಿಯಾಗಿರಲೇನು ?**
**ಆರ್ಯರಕ್ಕಿ ಸಶ್ರಿಮಿತರಾ ಮನೆಗಳಾದೊಡದೇನು**
**ಎಲ್ಲೆಲ್ಲು ಪೆಣ್ಜಾತಿ ಸಂಕಟದಲ್ಲೆಯಿಹುದು.**
**ನಿನ್ನ ಮಾತೆ ಕೌಸಲ್ಯೆ ನೋವುಣತಲ್ಲವೇಯೀಗ**
**ಋಷಿ ಪುಂಗವರೇನು ಸತಿಯರುದ್ಧಾರ ಮಾಡಿಹರೆ"[೧೨]**

"ಕೇಳು ರಾಮ ಸಮಾಜದಲ್ಲಿ ಹೆಣ್ಣು ಶೋಷಿತಳಾಗಿದ್ದಾಳೆ. ಅವಳು ರಾಣಿಯಾಗಿರಲಿ, ದಾಸಿಯಾಗಿರಲಿ ಎಲ್ಲೆಲ್ಲೂ ಹೆಣ್ಣು ಜಾತಿ ಸಂಕಟದಲ್ಲಿ ಮುಳುಗಿದೆ. ಇದಕ್ಕೆ ಮೂಲ ಕಾರಣ ಸ್ತ್ರೀ-ಪುರುಷ ತಾರತಮ್ಯ, ಇದನ್ನು ನೀನೇ ನೀಗಬೇಕೆಂದು" ಹೇಳಿ ಕಳುಹಿಸಿಕೊಡುತ್ತಾರೆ. ಈ ಭಾಗವಂತು ಭಾರತೀಯ ಸಂಸ್ಕೃತಿಯ ಜೀವನ ವ್ಯವಸ್ಥೆಯನ್ನು ಅಂದಿನಿಂದ-ಇಂದಿನವರೆಗೆ ಕಣ್ಣು ಕಟ್ಟುವಂತೆ ಕಡೆದು ನಿಲ್ಲಿಸುತ್ತದೆ. ಸೀತಾಪಹರಣ, ರಾಮನ ವಿಲಾಪ, ಲಕ್ಷ್ಮಣನ ಸಾಂತ್ವಾನ, ಜಟಾಯು ಪ್ರಸ್ತಾಪ, ಶಬರಿಯ ಭಕ್ತಿ ಇವರ ಕಾವ್ಯದಲ್ಲಿ ಓದುಗರನ್ನು ಅತ್ಯಂತ ಹೃದಯಸ್ಪರ್ಶಿಯಾಗಿ ಮನಮುಟ್ಟುತ್ತದೆ. ಮೊಯಿಲಿಯವರ ಐದು ಸೋಪಾನಗಳು ಅತ್ಯಂತ ಕುತೂಹಲವನ್ನು ಉಂಟು ಮಾಡಿ ಹೊಸ ನಿರೀಕ್ಷೆಯಿಂದ ಓದಿಸಿಕೊಂಡು ಹೋಗುತ್ತವೆ. ಅಷ್ಟೇ ಅಲ್ಲದೆ ಸಂಶೋಧಕರಿಗೆ ಹೊಸ ಹೊಸ ಸಾಧ್ಯತೆಗಳತ್ತ ದಿಕ್ಕು ತೋರಿಸುತ್ತದೆ.

## ಪರಾಮರ್ಶನ ಗ್ರಂಥಗಳು


| | | |
|---|---|---|
| ೧. ತೊರವೆ ರಾಮಾಯಣ | ಕುಮಾರ ವಾಲ್ಮೀಕಿ<br>ಕನ್ನಡ ಸಾಹಿತ್ಯ ಪರಿಷತ್ತು<br>ಚಾಮರಾಜಪೇಟೆ, ಬೆಂಗಳೂರು-೧೮ | ೨೦೦೨ |
| ೨. ಶ್ರೀ ರಾಮಾಯಣ ದರ್ಶನಂ | ಕುವೆಂಪು<br>ಕನ್ನಡ ಪುಸ್ತಕ ಪ್ರಾಧಿಕಾರ, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-೧೮ | ೧೯೯೫ |
| ೩. ಶ್ರೀ ರಾಮಾಯಣ ಮಹಾನ್ವೇಷಣ | ಎಂ. ವೀರಪ್ಪ ಮೊಯಿಲಿ, ಮಾಹೇಶ್ವರಿ ಪ್ರಕಾಶನ, ಆರ್. ವಿ. ನಗರ, ಬೆಂಗಳೂರು | ೨೦೦೩ |
| ೪. ಕುಮಾರ ವ್ಯಾಸಭಾರತ | ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ ಮೈಸೂರು | ೧೯೯೮ |
| ೫. ಕನ್ನಡ ಸಾಹಿತ್ಯ ಚರಿತ್ರೆ | ರಂ. ಶ್ರೀ ಮುಗಳಿ<br>ಉಷಾ ಸಾಹಿತ್ಯ ಮಾಲೆ, ಮೈಸೂರು | ೧೯೭೧ |


೧೨. ಎಂ.ವಿ. ಮೊಯಿಲಿ. ಶ್ರೀ ರಾಮಾಯಣ ಮಹಾನ್ವೇಷಣಂ, ದ್ವಿತೀಯ ಸೋಪಾನ. ಪುಟ : ೨೮.

ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೨
ಜುಲೈ–ಡಿಸೆಂಬರ್, ೨೦೧೩

# ೩. ವಿಶ್ವಸಂಸ್ಥೆಯ ಸಂವಿಧಾನ ಮತ್ತು ಕನಕದಾಸರು

–ಪ್ರೊ|| ವಸಂತ ಕುಷ್ಟಗಿ*

United Nations Charter

United Nations Charter signed on June 26, 1945 (enterted into 24, 1945).

We the people of the United Nations determined to save succeeding generations from the scourage of war, which twice in one life time has brought untold sorrow to man kind, and

* To reaffirm faith in fundamental human rights in the dignity and worth of the human person, in the equal rights of men and women and of Nations large and small and.
* To establish conditions under which justice and respect for the abligations arising from treaties and other sources of International Law can be maintainded and,
* To promote social progress and better standards of life in large freedom. And for these ends :
* To pactice tolerance and live together in peace with one another as good neighbous and,

* ಎಂ.ಆಯ್.ಜಿ. ೨೬: ಆದರ್ಶನಗರ, ಮೊದಲ ಹಂತ. ಗುಲಬರ್ಗ–೫೮೫ ೧೦೫.

ಮೊ. : ೯೪೪೮೪೦೦೨೧೮.

* To Unite our strength to maintain International peace and security, and
* To ensure, by the acceptance of principles and the Institution of methods, that armed force shall not be used, save in the common interest and
* To employ International machinery for the promotion, of the economic and social advancement of all the peoples, Have resolved to cambine our efforts to acomplish there AIMS

  Accordingly, our respective commeettees, through representatives assembled in the city of SANFRANCISCO. we have exhibited their full powers found to be good and due, from, have agreed to the present charter of the United Nations orgnisations and do here by establish an International organisation to be known as the United Nations"

ಇಪ್ಪತ್ತನೆಯ ಶತಮಾನದಲ್ಲಿ ಎರಡು ಜಾಗತಿಕ ಮಹಾಯುದ್ಧಗಳನ್ನು ಎದುರಿಸಬೇಕಾಯಿತು. ಮುಂಗೈ ಜೋರಿನ ರಾಷ್ಟ್ರಗಳ ನಾಯಕರ ದುರಾಸೆಯಾದ ಅಹಂ ಸ್ಥಾಪನೆಯಲ್ಲಿ ದುಸ್ಸಾಹಸಗಳು ನಡೆದವು. ೧೯೧೪ ರಿಂದ ೧೯೧೮ರ ವರೆಗೆ ಮೊದಲನೆಯ ಜಾಗತಿಕ ಮಹಾಯುದ್ಧವು ನಡೆಯಿತು. ಜರ್ಮನ್ ಅಗ್ರಮಾನ್ಯ ಶಕ್ತಿಶಾಲಿಯಾದ ಯುದ್ಧೋತ್ಸಾಹಿ ರಾಷ್ಟ್ರವಾಯಿತು. ಅದನ್ನು ಸಹಿಸದ ಯುರೋಪ ಬೃಹತ್ ರಾಷ್ಟ್ರಗಳ ಕಾರ್ಯಸೂಚಿಯಿಂದಾಗಿ, ಜಗತ್ತಿನ ಶಾಂತಿ, ಭದ್ರತೆ ಕುಸಿದು ಅನುಮಾನ ದ್ವೇಷಾಸೂಯೆ, ವಿರೋಧಗಳ ಬಗ್ಗೆ ಅಪಪ್ರಚಾರವೇ ಆಯಿತು. ಬ್ರಿಟಿಷರು, ಫ್ರೆಂಚರು, ಅಮೇರಿಕನ್‌ರ ಸಂಯುಕ್ತ ಸೇನೆ ಜರ್ಮನ್‌ರನ್ನು ಸೋಲಿಸಿತು. ೧೯೧೮ರ ೧೧ನೆಯ ತಿಂಗಳು, ೧೧ನೆಯ ತಾರೀಖು ೧೧-೦೦ ಗಂಟೆಗೆ ಯದ್ಧ ನಿಲುಗಡೆಗೆ ಒಪ್ಪಂದವಾಯಿತು.

ಮೊದಲನೆಯ ಜಾಗತಿಕ ಯುದ್ಧದ ಸಂದರ್ಭದಲ್ಲಿ ಅಮೇರಿಕಾ ಅಧ್ಯಕ್ಷ ಉಡ್ರೊ ವಿಲ್ಸನ್ನನು "ಯುದ್ಧವನ್ನು ಕೊನೆಗಾಣಿಸುವುದಕ್ಕಾಗಿ ಯುದ್ಧ" ಎಂದು ಯುದ್ಧ ನೀತಿ

ಪ್ರಕಟಿಸಿದ, ಎರಡನೆಯ ಜಾಗತಿಕ ಯುದ್ಧದ ಸಂದರ್ಭದಲ್ಲಿ ಆಗ ಅಮೇರಿಕಾ ಅಧ್ಯಕ್ಷನಾಗಿದ್ದ ರೂಸ್‌ವೆಲ್ಟನು "ಸ್ವಾತಂತ್ರ್ಯವನ್ನು ಕಾಪಾಡುವುದಕ್ಕಾಗಿ ಯುದ್ಧ" ಎಂದು ಪ್ರಕಟಿಸಿದ. ಎರಡನೆಯ ಜಾಗತಿಕ ಯುದ್ಧವು ೧೯೩೯ರಿಂದ ಸುಮಾರು ಏಳು ವರ್ಷಗಳ ಕಾಲ ನಡೆಯಿತು. ೧೯೪೫ರ ಆಗಸ್ಟ್ ೬ ರಂದು, ಆಗಿನ ಅಮೇರಿಕದ ಅಧ್ಯಕ್ಷನಾಗಿದ್ದ ಹ್ಯಾರಿಟ್ರೂಮನ್, ಅಣುಬಾಂಬನ್ನು ಜಪಾನಿನ ಹಿರೋಷಿಮಾದ ಮೇಲೆ ಹಾಕಿಸಿದ. ಮೂರು ದಿವಸಗಳ ನಂತರ ೯ನೆಯ ತಾರೀಖಿನಂದು ನಾಗಾಸಾಕಿಯ ಮೇಲೆ ಬಾಂಬ ಪ್ರಯೋಗವಾಯಿತು. (ಈ ವಿಧ್ವಂಸಕ ಘಟನೆಯಿಂದ ಪ್ರಪಂಚವು ಇನ್ನೂ ಎಚ್ಚತ್ತಿದ್ದಿಲ್ಲ) ಆಗಸ್ಟ್ ೧೪ ರಂದು, ಜಪಾನ್ ಅಮೇರಿಕೆಗೆ ಶರಣಾಗತವಾಯಿತು. ಜಾಗತಿಕ ಯುದ್ಧ ಬೇಷರತ್ತಾಗಿ ಅಂತ್ಯಗೊಂಡಿತು. ತತ್‌ಪರಿಣಾಮವಾಗಿ ಮಾನವ ಕುಲವು ಸಂತ್ರಸ್ತವಾಯಿತು. ರೋಗರುಜಿನಗಳಿಗೆ ಆಹ್ವಾನ ನೀಡಿತು. ಮುಗ್ಧ ಮಾನವರೆಲ್ಲ ಅಪಾಂಗರಾದರು. ಅನೇಕರು ವಿಧವೆಯರಾದರು. ಬಾಂಬು ಬಿದ್ದ ನೆಲೆಯಲ್ಲಿ ಕಾಳು ಬೆಳೆಯದೇ ಹೋಯಿತು. ಮಕ್ಕಳೆಲ್ಲ ದಿಕ್ಕು ಕಳೆದುಕೊಂಡರು. ಇದರ ಪರಿಣಾಮವು ಕೇವಲ ಯುದ್ಧ ನಡೆದ ಸ್ಥಳಗಳಲ್ಲಷ್ಟೇ ನಡೆಯಲಿಲ್ಲ. ಜಗತ್ತಿನ ಎಲ್ಲ ಖಂಡಗಳ, ಉಪಖಂಡಗಳ, ರಾಷ್ಟ್ರಗಳ ಹಳ್ಳಿಹಳ್ಳಿಗೂ ಈ ಸಂತ್ರಸ್ತತೆಯು ಸೋಂಕಾಗಿ ತನ್ನ ದುಷ್ಟ ಪ್ರಭಾವವನ್ನು ಬೀರಿ ಮುಗ್ಧ ಬದುಕುಗಳನ್ನು ನರಕಕ್ಕೆ ತಳ್ಳಿತು.

ಕಳಿಂಗ ಯುದ್ಧದ ಅನಂತರ ಅಶೋಕ ಸಾಮ್ರಾಟನು ಜಗತ್ತಿನಲ್ಲಿ ಸುಭಿಕ್ಷೆಯನ್ನು ಪುನಃ ಸ್ಥಾಪಿಸಲು, ಶಾಂತಿ ಸಮಾಧಾನಗಳನ್ನು ಪುನಃ ನೆಲೆಸಲು ಬುದ್ಧನ ಪ್ರಕಾಶದಲ್ಲಿ ಸಂಘಗಳನ್ನು ಕಟ್ಟಿದನು. ಸತ್ಯ ಅಹಿಂಸೆಗಳ ನೆಲೆಯಲ್ಲಿ ವಿಶ್ವಶಾಂತಿಯನ್ನು ಸ್ಥಾಪಿಸಿ ಮಾನವ ಸಂಪನ್ಮೂಲವನ್ನು ವಿವೇಕಪೂರ್ಣವಾಗಿ ಚೈತನ್ಯಗೊಳಿಸಲು ಶಾಸನಗಳನ್ನು ಆ ಸೇತು ಹಿಮಾಚಲ ನೆಡಿಸಿದನು. ನೀತಿ ನಿಯಮಗಳಿಂದ ಬದುಕುವ ಹಕ್ಕು-ಕರ್ತವ್ಯಗಳನ್ನು ಪ್ರಚುರಗೊಳಿಸಿದನು. ಸೂಕ್ಷ್ಮವಾಗಿರುವ ಮನಸ್ಸುಗಳನ್ನು ಏಕೋಭಾವನೆಯಲ್ಲಿ ಕೋದುಕೊಳ್ಳಲು ಶ್ರಮಮೀರಿ ಪ್ರಯತ್ನಿಸಿದ. ಇಂತಹ ಘಟನೆಗಳು ಜಗತ್ತಿನ ಇತಿಹಾಸದಲ್ಲಿ ಸಾಕಷ್ಟು ಸಿಗುತ್ತವೆ. ಅಲ್ಲಿ ಮಾನವ ಸಂಪನ್ಮೂಲದ ಮಹತಿಯನ್ನರಿತು, ವಿವೇಕದಲ್ಲಿ ಅಂತಃಕರುಣೆಯು ಉನ್ಮೀಲಿತವಾಗಿ, ಅದರಲ್ಲಿರುವ ದುಸ್ಸಾಹಸದ ಪೀಡೆಗಳನ್ನೆಲ್ಲ ಬೇರು ಸಹಿತ ಕೀಳಿ, ಸುಪ್ರಸನ್ನತೆಯನ್ನು ನಿರ್ಮಿಸಲು ಪ್ರಯತ್ನಿಸುವ ಅಧ್ಯಾತ್ಮ ಜೀವಿಗಳು ಇದ್ದದ್ದನ್ನು ಕಾಣುತ್ತೇವೆ. ಆ ವ್ಯಕ್ತಿಗಳು ಮಾನವ ಪ್ರೀತಿಗಾಗಿ, ಅದರ ಮುಂಬೆಳೆಗಾಗಿ ಸ್ಫೂರ್ತಿಯಾಗಿ ನಿಂತು ಮಾನವ ಸಂಪತ್ತನ್ನು ಬೆಳೆಸುವಲ್ಲಿ ಸನ್ನದ್ಧರಾಗುತ್ತಾರೆ.

ಅಂತಹ ಒಂದು ದುರ್ಧರ ಪ್ರಸಂಗ ೨೦ನೆಯ ಶತಮಾನದಲ್ಲಿ ಸಂಘಟಿತವಾದಾಗ ಮಾನವ ಕುಲದ ಹಿತಾಸಕ್ತಿಯುಳ್ಳ ಸದಸದ್ವಿವೇಕದ ವಿಶ್ವಚೇತಸರು ಸೇರಿ, ವಿಶ್ವದಲ್ಲಿಯ

ಸಹಜ ಜೀವನವು ಶಾಂತಿ ಸೌಹಾರ್ದತೆಯಿಂದ ನಡೆಯಬೇಕೆಂದು ಯೋಚಿಸಿದರು. ಆಗ ಬಹುತೇಕ ರಾಷ್ಟ್ರಗಳ ಪ್ರತಿನಿಧಿಗಳು ಸೇರಿ, ಜಗದ ಬದುಕು ಆರ್ಥಿಕ ಸಾಮಾಜಿಕ ಶೈಕ್ಷಣಿಕವಾಗಿ ಸಕಲ ಸ್ವಾಸ್ಥ್ಯಗಳನ್ನು ಪಡೆದು ನಿರಾತಂಕವಾಗಿ ನಡೆಯಬೇಕೆಂದು ಯೋಚಿಸಿದರು. ಮಾನವ ಕುಲವನ್ನು ತತ್ತರಗೊಳಿಸಿ ನಾಶ ಮಾಡುವ ಯೋಚನೆ ಯಾರಿಗೂ ಬರಬಾರದೆಂಬ ಸದಿಚ್ಛೆಯಿಂದ ಸಂಯುಕ್ತ ರಾಷ್ಟ್ರ ಸಂಸ್ಥೆ ಅರ್ಥಾತ್ ವಿಶ್ವಸಂಸ್ಥೆಯು ರೂಪುಗೊಂಡಿತು. ಅದರ ಚಾರ್ಟರಿನ ಪ್ರಿಯಾಂಬಲ್ಲಿನಲ್ಲಿರುವ ವಿಷಯಗಳು ಮುಖ್ಯವಾಗಿ ಮಾನವ ಹಕ್ಕು-ಕರ್ತವ್ಯಗಳ ಬಗ್ಗೆ ಪುನಃ ವಿಶ್ವಾಸವನ್ನು ಸ್ಥಾಪಿಸಿ ಮಾನವರೆಲ್ಲರೂ ಪರಸ್ಪರ ಗೌರವದಿಂದ ಬಾಳಲು ಅನುಸರಣೆಗೊಳಿಸುವುದು, ಸಮಬಾಳು ಸಮಪಾಲು, ಸಮಭಾವ, ಸಮದುಡಿತಗಳ ಬಗ್ಗೆ ಜಾಗೃತಿ ಮೂಡಿಸಿ, ಲಿಂಗಭೇದವನ್ನಡಗಿಸಿ, ಬದುಕುವ ಹಕ್ಕಿನ ಸಮಾನತೆಯನ್ನು, ಸಣ್ಣ ದೊಡ್ಡ ರಾಷ್ಟ್ರಗಳೆನ್ನದೆ ಜಗದಲ್ಲಿಯ ಅಂತಿಮ ಪ್ರಜೆಯವರೆಗೂ ಒದಗಿಸಿಕೊಡುವುದು ಇತ್ಯಾದಿ.

ಈ ಉದ್ದೇಶವನ್ನು, ಈ ಸ್ಥಿತಿಯಲ್ಲಿ ಅನುಷ್ಠಾನಕ್ಕೆ ತರುವುದಕ್ಕಾಗಿ ಮಾಡಬೇಕಾದ ನ್ಯಾಯುತ ಕರ್ತವ್ಯಗಳ ಪಾಲನೆಗೆ ಅಂತರರಾಷ್ಟ್ರೀಯ ಕಾನೂನನ್ನು ಸ್ಥಾಪಿಸುವುದು; ಹೀಗೆ ಸಾಮಾಜಿಕರಲ್ಲಿ ವಿಶ್ವಾಸವನ್ನು ಮೂಡಿಸಿ ಅವರಿಗೆ ಉತ್ತಮ ಸ್ಥಿತಿಗಳಿಂದ ಕೂಡಿದ ಬದುಕನ್ನು ನೀಡಲು ಜಗಹಿತಕಾರಿಯಾದ ಸ್ವಾತಂತ್ರ್ಯವನ್ನು ಅಭಿವೃದ್ಧಿಗೊಳಿಸುವುದು.

ಇವುಗಳ ಉದ್ದೇಶಗಳನ್ನು ಸಾಧಿಸಲು, ಸಹಿಷ್ಣುತೆಯಲ್ಲಿ ಶಾಂತಿ ಸೌಹಾರ್ದಗಳಿಂದ ಪರಸ್ಪರ ನೆರೆಹೊರೆಯಲ್ಲಿ ಬದುಕುವ ಕಲೆಯನ್ನು ಸಾಧಿಸಬೇಕು. ಮತ್ತು ಸಂಘಟಿತರಾಗಿ ಅಂತರರಾಷ್ಟ್ರೀಯ ಶಾಂತಿ ಮತ್ತು ಸುರಕ್ಷತೆಗಳನ್ನು ಕಾಪಾಡಬೇಕು. ಮನುಷ್ಯನ ಸಾಮಾನ್ಯ ಹಿತವನ್ನು ಕಾಪಾಡಲು ಶಸ್ತ್ರಾಸ್ತ್ರಗಳನ್ನು ಬಳಸಿ ರಕ್ತಪಾತಕ್ಕೆಯೆಡೆಕೊಡದೆ ಜನಹಿತ ಸಾಧನೆಯ ಸಾಮಾನ್ಯ ತತ್ತ್ವಗಳನ್ನು ಒಪ್ಪಿಕೊಂಡು ಆ ಮೂಲಕ ನಡೆದುಕೊಳ್ಳಬೇಕು; ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಆರ್ಥಿಕ ಮತ್ತು ಸಾಮಾಜಿಕ ಸ್ಥರದಲ್ಲಿ ಪರಸ್ಪರ ಪೂರಕವಾಗಿರುವ ಅಭಿವೃದ್ಧಿ ಸಾಧಿಸಲು ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು.

ವಿಶ್ವಸಂಸ್ಥೆಯ ಈ ಚಾರ್ಟರಿಗೆ (ಹಕ್ಕನ್ನು ನೀಡುವ ಸನ್ನದು, ಅಧಕೃತ ದಾಖಲೆ, ಸಂವಿಧಾನಕ್ಕೆ) ಆಗ ೪೬ ರಾಷ್ಟ್ರಗಳ ಪ್ರತಿನಿಧಿಗಳ ಒಪ್ಪಿಗೆ ನೀಡಿದಾಗ ಈ ಸಂಸ್ಥೆ ೨೬ನೆಯ ಜೂನ್ ೧೯೪೫ ರಲ್ಲಿ ಅಸ್ತಿತ್ವಕ್ಕೆ ಬಂದಿತು. ಇದರ ಮೂಲ ಉದ್ದೇಶ ಪ್ರಪಂಚದ ಸಾಮಾನ್ಯ ಪ್ರಜೆ ನಿರಾತಂಕವಾಗಿ ಸ್ವಾತಂತ್ರ್ಯದ ನೆಮ್ಮದಿಯ ಬದುಕನ್ನು ಸೌಹಾರ್ದಯುತವಾಗಿ ಬಾಳಬೇಕೆಂಬುದೆ ಆಗಿದೆ. ಸುರಕ್ಷೆ ಸುಭಿಕ್ಷೆಗಳಿಂದ ಮಾನವ ಜನ್ಮದ ಸಾರ್ಥಕತೆಯನ್ನು ಸಾಧಿಸಿಕೊಡುವ ನಿಮಿತ್ತ ಈ ಸಂಸ್ಥೆ ತನ್ನ ಕಾರ್ಯವ್ಯಾಪ್ತಿಯನ್ನು

ವಿಶ್ವಶಾಂತಿ ದೂತನಾಗಿ ಮಾಡುತ್ತಿದೆ. ಈಗ ಈ ವಿಶ್ವಸಂಸ್ಥೆಯ ಅಡಿಯಲ್ಲಿ ಒಪ್ಪಂದಕ್ಕೆ ಬಂದ ರಾಷ್ಟ್ರಗಳು ಸುಮಾರು ೧೯೧-೨೦೦ (೧೯೪೦ ರ ಪ್ರಕಾರ)

ಈ ನಿಟ್ಟಿನ ಪ್ರಯತ್ನವು ಜಗತ್ತು ನಡೆದು ಬಂದ ದಾರಿಯಲ್ಲಿ ಇದೇ ಮೊದಲನೆಯದಲ್ಲ. ಏಕೆಂದರೆ ಸೃಷ್ಟಿ ವಿಕಾಸಗೊಳ್ಳುತ್ತ ಬಂದಿರುವ ಕ್ಷಣದಿಂದಲೇ ಈ ಕಾರ್ಯವು ನಡೆಯುತ್ತಲೇ ಬಂದಿದೆ. ಪ್ರಕೃತಿಯು ಆಕ್ರೋಶಗೊಂಡಾಗಲೆಲ್ಲ ಸಮತೆಯನ್ನು ಕಾಪಾಡಿ ಸ್ವಾಸ್ಥ್ಯ ಸ್ಥಾಪಿಸಲು ಕ್ರಮಗಳು ಸಾಗಿ ಬರುತ್ತಲೇ ಇವೆ. ಸ್ವರೂಪವಿಲ್ಲದ ಸದಸದ್ವಿವೇಕದ ಒಂದು ಚೇತನ ಈ ಪ್ರಕೃತಿಯ ನಿಗೂಢದಲ್ಲಿದ್ದುಕೊಂಡು ಮಾರ್ಗದರ್ಶನ ಮಾಡುತ್ತಲೇ ಇದೆ. ಅದನ್ನು ಕೇಳುವ ಅಥವಾ ಬಿಡುವ ಅರ್ಥಾತ್ ಸ್ವೀಕರಿಸುವುದಕ್ಕಾಗಿ ಅಲ್ಲೊಂದು ಕರ್ತಾ ರೂಪದಲ್ಲಿ ಮನಸ್ಸಿರುತ್ತದೆ. ಆ ಮನಸ್ಸು ಸಂಪೂರ್ಣವಾಗಿ ಸದಸದ್ವಿವೇಕವನ್ನು ಆವರಿಸಿದರೆ, ಸರ್ವಹಿತಕಾರಿಯಾದ ಸುಪ್ರಸನ್ನ ವಾತಾವರಣದ ಸಂಬಂಧದಲ್ಲಿ ಹಿತವಾದ ಬದುಕು ಸಾಧ್ಯವಾಗುತ್ತದೆ. ವ್ಯತಿರಿಕ್ತವಾದರೆ ಅಹಿತಕರ ಬದುಕು. ಇಂತಹ ಮನಸ್ಸಿನ ಏರಾಟವನ್ನು ವ್ಯಕ್ತಿಯೇ ನಿಯಂತ್ರಿಸಿಕೊಂಡು ಸಹಕಾರಿ ಮುಖಿಯಾದ ಬದುಕಿನ ಒಪ್ಪಂದದ ಹಿತಕ್ಕಾಗಿ ಸಿದ್ಧಗೊಳ್ಳಲು ಕಾಲಾನುಕಾಲಕ್ಕೆ ತತ್ತ್ವ ಸಿದ್ಧಾಂತಗಳು ಒಡಮೂಡಿವೆ. ಹೀಗಾಗಿ ಆನುಕಾಲಕ್ಕೂ ಪ್ರಕೃತಿಯು ರೂಪಾಂತರವಾಗುತ್ತ ಪುರುಷ ಪ್ರಯತ್ನದಿಂದ ಬದುಕಿನ ಹಕ್ಕಿನ ಬಗ್ಗೆ ಎಚ್ಚರಿಸುತ್ತ, ಅದರ ಸಾಧನೆಗಾಗಿ ಸಂಘಟಿತ ವ್ಯವಸ್ಥೆಗಳನ್ನು ರೂಪುಗೊಳಿಸುತ್ತ ಬಂದಿರುವುದೆಲ್ಲವನ್ನು ಇತಿಹಾಸವು ದಾಖಲಿಸಿಕೊಂಡಿದೆ. ಸಮಷ್ಟಿಯ ಹಿತದಿಂದ, ಸಾಧನೆಯ ಬಲದಲ್ಲಿ ವ್ಯಷ್ಟಿಯು ಬೆಳೆದು, ಅವತಾರ ಪುರುಷನಾಗಿ, ಜಗತ್ತಿನಲ್ಲಿ ಶಾಂತಿ ಸಮಾಧಾನ ನೆಮ್ಮದಿಗಳನ್ನು ಸ್ಥಾಪಿಸಲು ಪ್ರಯತ್ನಿಸುತ್ತಲೇ ಬಂದಿದ್ದಾನೆ. ಆ ಪರಂಪರೆಯಲ್ಲಿ ಬಂದವರನ್ನು ನಾವು ಅವತಾರಗಳೆಂದು ಕರೆದಿರಬಹುದು. ಆದರೆ ಆ ಅವತಾರಗಳು ತೋರಿಸಿದ ನಡೆಯನ್ನು ಜೀವನ ತತ್ತ್ವಮಾರ್ಗವೆಂದಿದ್ದೇವೆ.

ಈ ನೆಲೆಯಲ್ಲಿ ಚಿಂತನಕ್ಕೊಳಗಾದಾಗ ಈಶ-ದಾಸ ಜೀವನ ತತ್ತ್ವಮಾರ್ಗವೊಂದು ನಮ್ಮ ಕಣ್ಣೆದುರು ಬರುತ್ತದೆ. ಈ ತತ್ತ್ವಮಾರ್ಗದ ಸೂತ್ರಗಳಲ್ಲಿ ಸಮಷ್ಟಿಯ ಜೀವನ ಲೀಲೆಗೆ ವ್ಯಷ್ಟಿಯೇ ಮೂಲ ಘಟಕನಾಗುತ್ತಾನೆ. ಈ ಮೂಲ ಘಟಕ ವ್ಯಷ್ಟಿ, ಎಕ್ಕಟೆಯಾಗಿ ಬದುಕನ್ನು ಸಾಗಿಸಲು ಆಗಲಾರದು. ಅವನು ಸಹಜೀವಿಯಾಗಿ ಬೆಳೆಯಬೇಕಾಗುತ್ತದೆ. ಆದ್ದರಿಂದ ವ್ಯಷ್ಟಿಯು ಮನಸ್ಸನ್ನು ಸದಸದ್ ವಿವೇಕದಿಂದ ವರ್ತಿಸಲು ಸಂಸ್ಕಾರಗೊಳಿಸಬೇಕಾಗುತ್ತದೆ. ಇದರ ತೀವ್ರತೆಯನ್ನು ಅರಿತ ಈಶ-ದಾಸ ತತ್ತ್ವವು, ದಾಸನನ್ನು ಅರ್ಥಾತ್ ಚೇತನ ಸ್ವರೂಪಿಯಾದ ಮನಸ್ಸನ್ನು ಸುಂದರವಾಗಿ ರೂಪಿಸಲು ವ್ಯಷ್ಟಿ ವ್ಯಷ್ಟಿಗಳನ್ನು ಸೌಹಾರ್ದಯುತವಾಗಿ ಬೆಳೆಸಲು ಕಾಲಕಾಲಕ್ಕೆ ಅವತಾರ ಪುರುಷರ

ಮಟ್ಟಕ್ಕೆ ಏರಿದ ಮಹಾಮಾನವ ಶಕ್ತಿಗಳನ್ನು ಅರಳಿಸಿದೆ. ಅದೇ ಪರಿಸರದಿಂದ ಮೇಲೆದ್ದು ಈಶ ಸ್ವರೂಪಿಯಾದ ಸಮಷ್ಟಿಯನ್ನು ನೆಮ್ಮದಿಯಿಂದ ಇಡಲು ಸಂದೇಶ ನೀಡಿದ್ದಾರೆ. ಅಂತಹವರಲ್ಲಿ ಕರ್ನಾಟಕದ ಹರಿದಾಸರು ಕೂಡ, ಅಂತಹ ಮಾನವ ಶಕ್ತಿಯನ್ನು ಪಡೆದುಕೊಂಡು, ತಮ್ಮ ನಿಟ್ಟಿನಲ್ಲಿ ಶಾಂತಿ ಸಮಾಧಾನಗಳಿಂದ ಕೂಡಿದ ಸುಂದರವಾದ ವಿಶ್ವನಿರ್ಮಾಣಕ್ಕೆ ವ್ಯಷ್ಟಿಗೆಲ್ಲ ಬದುಕಿನ ಸ್ವಾರಸ್ಯವನ್ನು ತಿಳಿಸಿ ಅವರೆಲ್ಲ ಮಾನವ ಧರ್ಮವನ್ನು ಆಲಂಗಿಸಿ ನಡೆಯಲು ತತ್ತ್ವಪ್ರಸಾರ ಮಾಡಿದ್ದಾರೆ. ಆ ಬಲದಿಂದ ಒಳ್ಳೆಯ ಮಾನವ ಸಮಾಜವು ತನ್ನ ಅಸ್ತಿತ್ವವನ್ನು ಪ್ರಕಾಶಿಸುತ್ತಲೇ ಸಾಗಿದೆ.

ಹರಿದಾಸರ ತತ್ತ್ವ ಚಿಂತನೆಯಲ್ಲಿ ಇಹಲೋಕದ ಬದುಕು ಸುವ್ಯವಸ್ಥಿತವಾಗಿ ಪ್ರಗತಿ ಸಾಧಿಸಿದರೆ, ಪರವನ್ನು ಈ ನೆಲೆಯಲ್ಲಿಯೇ ಸಾಕ್ಷಾತ್ಕಾರಗೊಳಿಸಿಕೊಳ್ಳಲು ಸಾಧ್ಯವಿದೆಯೆಂಬುದನ್ನು ಕಾಣಬಹುದು. ಅವರ ಪ್ರಕಾರ ವ್ಯಷ್ಟಿವ್ಯಷ್ಟಿಯು (ಹಾಗೆ ನೋಡಿದರೆ ಜೀವಿ ಜೀವಿಗಳೆಲ್ಲ) ಹುಟ್ಟಿದಾರಭ್ಯದಿಂದ ದತ್ತ ಸ್ವಾತಂತ್ರ್ಯವನ್ನು ಪಡೆದೇ ಜನ್ಮತಾಳಿರುತ್ತವೆ. ಅದನ್ನು ಬಳಸುವ ಹೊಣೆ ಆತನದೇ ಆಗಿರುತ್ತದೆ. ಆದರೆ ಆತನಿಗೆ ಅರ್ಥಾತ್ ಆತನ ಮನಸ್ಸಿಗೆ ಪ್ರೇರಣೆಯಾಗಿ ಸದಸದ್ವಿವೇಕ/ಅಸದಸ್ ಅವಿವೇಕ ನಿಂತಿರುತ್ತದೆ. ಇದು ಪೃಥಕ್‌ರಣೆಯಾಗಿರುವ ಮನಸ್ಸಿನ ಸ್ವರೂಪ. ಆ ಮನಸ್ಸು ಸದಸದ್ವಿವೇಕಕ್ಕೆ ವಾಲಿದಾರೆ ಸಮಷ್ಟಿಯಲ್ಲಿ ಆ ವ್ಯಕ್ತಿ ಗೌರವ ಪಡೆಯುತ್ತಾನೆ. ಅಂತಹವನಿಗೆ ತನ್ನ ಸ್ವರೂಪ ದರ್ಶನದಲ್ಲಿ ಆನಂದ ಪ್ರಾಪ್ತಿಯಾಗುತ್ತದೆ. ಇದರ ವ್ಯತಿರಿಕ್ತವಾಗಿ ಎಂದರೆ ಅವಿವೇಕಕ್ಕೆ ವ್ಯಷ್ಟಿಯ ಮನಸ್ಸು ವಾಲಿದರೆ ಆ ನಿಟ್ಟಿನಲ್ಲಿಯೇ ಸ್ವರೂಪದರ್ಶನವಾಗಿ ಆ ಮೌಲ್ಯದ ಆನಂದ ಪ್ರಾಪ್ತಿ ಅಲ್ಲಿ ಎಂದರೆ ಜಗತ್ತನ್ನು ಭಯಭೀತಗೊಳಿಸುವ ಭಯಂಕರತೆಯ ನಿಲುವು ಅಖಂಡವಾಗಿರುತ್ತದೆ. ಈ ಎರಡರಲ್ಲಿ ಮೊದಲನೆಯ ತರಹದ ವ್ಯಕ್ತಿಯಿಂದ ಸಾರ್ವಜನಿಕ ಹಿತಾಸಕ್ತಿಗಳು ಹ್ರಾಸವಾಗುವುದಿಲ್ಲ. ಆತ ಎಲ್ಲರೊಳಗೆ ಒಂದಾಗಿ ಬದುಕಿ ನೆಮ್ಮದಿಯನ್ನು ಸಾಧಿಸುತ್ತಾನೆ. ಇಂತಹ ವ್ಯಷ್ಟಿಗಳ ಸಮುದಾಯ ಹೆಚ್ಚಾದಂತೆ ಸಮಷ್ಟಿಯಾದ ಜಗತ್ತು ಪುರುಷಾರ್ಥ ಸಾಧನೆಯಲ್ಲಿ ವಿಶ್ವವೆಲ್ಲ ಒಂದಾಗಿ ನೆಮ್ಮದಿಯನ್ನು ಸಾಧಿಸುತ್ತದೆ. ಇಂತಹ ವ್ಯಷ್ಟಿಗಳ ಸಮುದಾಯ ಹೆಚ್ಚಾದಂತೆ ಸಮಷ್ಟಿಯಾದ ಜಗತ್ತು ಪುರುಷಾರ್ಥ ಸಾಧನೆಯಲ್ಲಿ ವಿಶ್ವವೆಲ್ಲ ಒಂದಾಗಿ ನೆಮ್ಮದಿಯನ್ನು ಅನುಭವಿಸತೊಡಗುತ್ತದೆ. ಆಗ ಆ ವಿಶ್ವವು, ಪರಸ್ಪರ ಹೃದಯ ದಾರಿದ್ರ್ಯವನ್ನು ಕಳೆದುಕೊಂಡ, ಈ ವಿಶ್ವದಲ್ಲಿ ಎಲ್ಲರೂ ಪರಸ್ಪರ ಪೂರಕವಾಗಿದ್ದು, ಬದುಕುವ ಹಕ್ಕನ್ನು ಪಡೆದಿರುವ ಪ್ರಕೃತಿಯ ಮೂಲತತ್ತ್ವದ ವಿಕಾಸ, ಆ ವಿಕಾಸದಲ್ಲಿಯ ಪ್ರಕಾಶವನ್ನು ವಿಶ್ವದ ಎಲ್ಲ ಜೀವಿಗಳಿಗೂ ಪಡೆದುಕೊಳ್ಳಲು ಯಾವ ಅಭ್ಯಂತರವು ಇರುವುದಿಲ್ಲ, ಹಾಗೆ ಪಡೆದವರಾದವರೆಲ್ಲ ವಿಶ್ವನೆಮ್ಮದಿಯನ್ನು ಕಾಪಾಡುವ ಮಹಾಚೇತನಗಳಾಗುತ್ತಾರೆ. ಅಂತಹ ಚೇತನಗಳು ರೂಪುಗೊಳ್ಳುವುದಕ್ಕೆ ಕನಕದಾಸರ ಸಾಹಿತ್ಯದಲ್ಲಿ ಬೇಕಾದಷ್ಟು ಪ್ರೇರಣೆಯಾಗಿರುವ ವಿಷಯಗಳಿವೆ.

ಕನಕದಾಸರು, ೧೬ನೇ ಶತಮಾನವು ಜಗತ್ತಿಗೆ ನೀಡಿದ ತ್ರಿಕಾಲಾತೀತವಾದ ಲೋಕಕವಿ. ಅವರು ಲೋಕದ ಎಲ್ಲ ಮೈಗಳನ್ನು ಅನುಭವಿಸಿದವರು. ತಮ್ಮ ಸುತ್ತಲಿನ ಸಮಷ್ಟಿಯ ಒಳಹೊರಗುಗಳನ್ನೆಲ್ಲ ಬಲ್ಲವರು. ಹೀಗಾಗಿ ಅವರ ಸಾಹಿತ್ಯದಲ್ಲಿ ಜಗತ್ತಿನ ಬದುಕಿನ ಮೂಲ ಘಟಕವಾದ ವ್ಯಷ್ಟಿಯ ಬಗ್ಗೆ ಬಹಳ ಕಾಳಜಿಯಿರುವುದನ್ನು ಕಾಣಲಾಗುತ್ತದೆ. ಅಲ್ಲಿ ಅವರು ಸಾರಿದ ಮಾನವ ನೀತಿಯಿಂದ ಮಾನವ ಸಂಪನ್ಮೂಲದ ಸುಂದರ ಕ್ರಿಯಾಶಕ್ತಿಯು ತ್ರಿಕಾಲಾಬಾಧಿತವಾಗಿದೆ. ನಿತ್ಯಸತ್ಯವನ್ನು ಮತ್ತೆ ಮತ್ತೆ ಪ್ರಕಾಶಮಾನಕ್ಕೆ ತಂದಂತಿದೆ. ಮನಸ್ಸನ್ನು ಸತ್ಯಾವಲಂಬನಗೊಳಿಸಿ ಸರ್ವಸಮ್ಮತವಾದ ಜೀವನ ಮೌಲ್ಯಗಳನ್ನೆಲ್ಲ ಅರಳಿಸಿಕೊಂಡು ನಡೆಯುವತ್ತ ಅವರ ಸಾಹಿತ್ಯದ ಧ್ವನಿಯು ಸೆಳೆತವಾಗಿದೆ.

ಈ ನಿಟ್ಟಿನಲ್ಲಿ ವ್ಯಷ್ಟಿಯ ನಡೆನುಡಿಗೆ ಪ್ರೇರಣೆಯಾಗುವ ಅವರ ಅಂತರಂಗದ ನುಡಿಗಳನ್ನು ಹೀಗೆ ಸಂಗ್ರಹಿಸೋಣ :

**"ಏನು ಮಾಡಲಯ್ಯ ಬಯಲಾಸೆ ಬಿಡದು**
**ಮಾನವ ಮೃಗೇಂದ್ರ ರಕ್ಷಿಪಯ್ಯ"**
**"ದುರ್ಜನರ ಸಂಗವನು ಎಂದಿಗೊಲ್ಲೆನು ಇಂಥ ।**
**ಸಜ್ಜನರ ಸಂಗದೊಳಗಿರಿಸೆನ್ನ ರಂಗ"**
**"ಸತ್ಯವಂತರ ಸಂಗವಿರಲು ತೀರ್ಥವೇತಕೆ ?**
**ನಿತ್ಯ ಅನ್ನದಾನವಿರಲು ಭಯವು ಏತಕೆ ?"**
**"ಅಹುದಾದೊಡಹುದೆನ್ನಿ ಅಲ್ಲವಾದಡಲ್ಲವೆನ್ನಿ**
**ಸಹಜವಿದು ಸಜ್ಜನರ ಮನಕೆ ಸಮ್ಮತವು"**
**"ಏನಿದೆತ್ತಣ ಬಯಕೆ ಎಲೋ ಮಂಕುಜೀವ**
**ನೀನು ಅರಿತರೆ ಪೇಳು ನಿಜವೆನಗೆ"**
**"ಏನು ಬರುವುದೋ ಸಂಗಡೇನು ಬರುವುದೋ**
**ದಾನಧರ್ಮಮಾಡಿ ಬಹು ನಿಧಾನಿಯೆನಿಸಿಕೊಳ್ಳೊ ಮನುಜ"**
**"ಎಲ್ಲರೂ ಮಾಡುವುದು ಹೊಟ್ಟೆಗಾಗಿ । ಗೇಣು ಬಟ್ಟೆಗಾಗಿ"**
**"ನಾನು ನೀನು ಎನ್ನದಿರೋ ಹೀನ ಮಾನವ**
**ಜ್ಞಾನದಿಂದ ನಿನ್ನ ನೀನೆ ತಿಳಿದು ನೋಡೆಲೋ-ಪ್ರಾಣಿ"**
**"ಬೇಕೆಂದರೆ ಬಾರದು ಒಲ್ಲೆನೆಂದರೆ ಹೋಗದು**
**ಏಕಂಜುವಿ ಎಲೋ ಶ್ರೀಹರಿ ಕರುಣಿಸದಲೆ ಒಂದಾಗದು"**
**"ಮರೆಯದಿರು ಮರೆಯದಿರು ಎಲೆ ಮಾನವಾ ನಿನ್ನ**

ಸಿರಿಯ ಹವಣೇನು ಹೇಳಲೊ ಮಾನವಾ ॥ ಪ ॥
ಗೆಲ್ಲು ಸೋಲಿನ ಮಾತು ಸಲ್ಲವೆಲವೋ ನಿನಗಿ
ದೆಲ್ಲವನು ಬಿಡು ಗರ್ವ ನಿನಗೇತಕೋ ॥"

ಕನಕದಾಸರ ಇಂತಹ ಆತ್ಮವಿವೇಚನೆಯಲ್ಲಿ ವ್ಯಷ್ಟಿ ಸದೃಢ ಚೇತನನಾಗುತ್ತಾನೆ. ಮಾನವ ಹಕ್ಕುಗಳನ್ನು ಸಮಷ್ಟಿಯ ಹಿತಕ್ಕಾಗಿ ಬೆಳೆಸಿಕೊಳ್ಳತೊಡಗುತ್ತಾನೆ. ಸರ್ವರೂ ದತ್ತಸ್ವಾತಂತ್ರ್ಯರು ಎಂಬುದನ್ನು ಮನದಟ್ಟು ಮಾಡಿಕೊಳ್ಳುತ್ತಾನೆ. ವರ್ಣಭೇದ, ಭಾಷಾ ಭೇದಗಳಿಂದ ಮುಕ್ತನಾಗಿರಲು ಹವಣಿಸುತ್ತಾನೆ. ಜಗದೇಳಿಗೆಗೆ ತಾನೂ ಒಂದು ಅಗಾಧವಾದ ಸಂಪನ್ಮೂಲವೆಂಬುದನ್ನು ಬಗೆಯುತ್ತಾನೆ. ಅದನ್ನೇ ಎಲ್ಲರೂ ದೃಢಪಡಿಸಿಕೊಂಡು ಬಾಳಲು ಪ್ರೇರಣೆಯಾಗುತ್ತಾನೆ. ತನ್ನ ಬದುಕಿನ ಮೂಲಕ ಹಾಗೂ ಸಾಹಿತ್ಯದ ಮೂಲಕ ಈ ರೀತಿ ಬೆಳೆದ ಸಂಪನ್ಮೂಲದಲ್ಲಿ, ತನ್ನನ್ನು ತಾನು ಗೌರವಿಸಿಕೊಂಡು ತನ್ನಂತೆ ಪರರ ಬಗೆಯೆಂದು ಅವರನ್ನು ಗೌರವಿಸುವ ಕಣ್ಣು ಅವನಲ್ಲಿ ಬರುತ್ತದೆ. ದೃಷ್ಟಿ ಪ್ರಜ್ವಲಿಸುತ್ತದೆ. ಆ ಮೂಲಕ ಜಗತ್ತಿನಲ್ಲಿ ವ್ಯಕ್ತಿ ಸ್ವಾತಂತ್ರ್ಯವು ನ್ಯಾಯಶಾಂತಿಗಳ ರಕ್ಷಣೆಗೆ ಶಕ್ತಿಯಾಗುತ್ತದೆ. ಇತರರಿಗೆ ಭಾರವಾಗದಂತೆ ಸುಂದರವಾಗಿ ಬದುಕುವ, ಮಾತಾಡುವ, ಅಭಿಪ್ರಾಯ ವ್ಯಕ್ತಮಾಡುವ ಸ್ವಾತಂತ್ರ್ಯವನ್ನು ಪಡೆಯುತ್ತಾನೆ. ತಾನು ಬೆಳೆದು, ತನ್ನೂರು ಬೆಳೆಸಿ, ರಾಜ್ಯ ದೇಶಾದಿಯಾಗಿ ವಿಶ್ವಪ್ರೀತಿಯ ಪ್ರಕೃತಿಯನ್ನು ಪಡೆಯುತ್ತಾನೆ. ಇಂತಹ ಮನಸ್ಸನ್ನು ಬೆಳೆಸಲು, ಪರಂಪರೆಯಾಗಿ ಧಾವಂತಗಳು ನಡೆದಿವೆ. ದರ್ಶನಗಳು ಮೂಡಿ ಬಂದಿವೆ. ಈ ಪರಂಪರೆಯಲ್ಲಿ ದಾಸಶ್ರೇಷ್ಠರಾದ ಕನಕದಾಸರು ತಮ್ಮ ಕೀರ್ತನೆಗಳ ಮೂಲಕ ಕಾವ್ಯಗಳ ಮೂಲಕ ಪ್ರೇರಣೆಯಾಗಿ ನಿಂತವರು. ಏಕೆಂದರೆ ಅವರ ಕಾವ್ಯವಾಣಿ ಮನುಷ್ಯನ ಮನಸ್ಸನ್ನು ತತ್‌ಕ್ಷಣವೇ ಸಂಸ್ಕಾರಗೊಳಿಸಿ ಸಮಾಧಾನಿಯನ್ನಾಗಿಸುತ್ತದೆ. ಸಮಾಭಾವದಿಂದ ಸಮಸಮಯ ಸಮ ಅವಕಾಶವನ್ನು ಬಳಸಿಕೊಳ್ಳಲು ಆ ಮನಸ್ಸಿಗೆ ನೀಡುತ್ತದೆ. ಅಂತಹ ಮಾತುಗಳನ್ನು ಕಂಡಾಗ ಆ ಮಾತುಗಳ ಸತ್ತ್ವಾಂಶವೆಲ್ಲ ಇಂದಿನ ವಿಶ್ವಸಂಸ್ಥೆ ಸನ್ನದಿನಲ್ಲಿ ಕಣ್ಣರಿಯದ ಕರುಳಿನ ನೆಲೆಯಲ್ಲಿ ಮಿಡಿದಿವೆ. ಏಕೆಂದರೆ ವಿಶ್ವಸಂಸ್ಥೆಯು ಜಗತ್ತಿನ ಒಟ್ಟು ಹಿತಕ್ಕಾಗಿ ಇಂದಿನ ಶತಮಾನದಲ್ಲಿಯೂ ವ್ಯಷ್ಟಿಯನ್ನು ವಿಶ್ವಮಾನವನನ್ನಾಗಿ ಮಾಡುವ ನಿಟ್ಟಿನ ಸಂಸ್ಥೆಯೆಂದು ಪರಿಗಣಿಸಲಾಗಿದೆ. ಹಿಂದೆ ಇಂತಹದ್ದೆ ಒಂದು ಪ್ರಯೋಗ ಹೋದ ಶತಮಾನದಲ್ಲಿ ಮೊದಲನೆಯ ಜಾಗತಿಕ ಯುದ್ಧವಾದ ಮೇಲೆ ಲೀಗಾಫ್‌ನೇಶನ್ಸ್ (ಸಂಯುಕ್ತ ರಾಷ್ಟ್ರ ಸಂಘ) ಎಂಬ ಹೆಸರಿನಿಂದ ಸಂಪನ್ನಗೊಂಡಿತ್ತು. ಆದರೆ ಆ ಸೊತ್ತು ಸಹೃದಯರ ಕೈಗೆ ಸಿಕ್ಕಲಿಲ್ಲ. ಹೀಗಾಗಿ ಫಲದೊರೆಯಲಿಲ್ಲ. ಆ ಅನುಭವದ ತಳಪದಿಯಲ್ಲಿ ಸಂಯುಕ್ತ ರಾಷ್ಟ್ರ ಸಂಸ್ಥೆ (ವಿಶ್ವಸಂಸ್ಥೆ) ಎಂಬ ಹೆಸರಿನಿಂದ ಒಳ್ಳೆಯ ನೆಲಗಟ್ಟಿನ ಮೇಲೆ ಕಾರ್ಯ ನಿರ್ವಹಿಸುತ್ತಿದೆ. ಹೀಗಾಗಿ ಇತ್ತೀಚೆಗೆ ಸರ್ವಶಕ್ತ ರಾಷ್ಟ್ರಗಳ

ಜಾತಿಕ ಯುದ್ಧಗಳ ಮಟ್ಟಕ್ಕೆ ಸಾಗದಂತೆ, ವಿಶ್ವವನ್ನು ಸತ್ಯನಾಶ ಮಾಡುವ ದಿಸೆಗೆ ಅವರ ಮನಸ್ಸನ್ನು ದಟ್ಟಗೊಳಿಸದಂತೆ, ಈ ವಿಶ್ವಸಂಸ್ಥೆ ಮಧ್ಯಸ್ಥಿಕೆ ವಹಿಸಿ ಕಾಪಾಡಿಕೊಂಡಿರುವದಂತೂ ಸತ್ಯ. ಈ ನೆಲೆ ಇನ್ನಷ್ಟು ಭದ್ರಗೊಳಿಸಬೇಕಾದರೆ ಕನಕದಾಸರ ಸಂತವಾಣಿಯಲ್ಲಿಯ ಸೂರ್ಯಪ್ರಕಾಶದ ನುಡಿಗಳನ್ನು, ವಿಶ್ವ ಸಂಸ್ಥೆಯ ಚಾರ್ಟ್‌ರಿಗೆ ಆ ಸಂವಿಧಾನದಲ್ಲಿಯ ನಿಯಮಗಳಿಗೆ, ಇನ್ನಷ್ಟು ಪ್ರಖರವಾಗಿ ಪ್ರಕಾಶ ಬೀಳುವ ರೀತಿಯಲ್ಲಿ ಇಂಗ್ಲಿಷಿಗೆ, ಫ್ರೆಂಚಿಗೆ ಮತ್ತು ರಷಿಯನ್ ಮೊದಲಾದ ಭಾಷೆಗಳಿಗೆ ಅಷ್ಟೇ ಅಲ್ಲ–ವಿಶ್ವಸಂಸ್ಥೆಯ ಪರಿಧಿಯಲ್ಲಿ ಬರುವ ಬಹುಭಾಷೆಗಳನ್ನೊಳಗೊಂಡು ವಿಶ್ವದ ಸರ್ವ ಭಾಷೆಗಳಿಗೂ ಅನುವಾದಗೊಳಿಸಿ ಆದಷ್ಟು ಕನಕದಾಸರ ಸಾಹಿತ್ಯವನ್ನೆಲ್ಲ ವಿಶ್ವದ ಸೊತ್ತನ್ನಾಗಿಸಬೇಕಾಗಿದೆ. ಆ ಸೊತ್ತಿನಲ್ಲಿ ಕನಕದಾಸರು ಜಾತಿ ಮತ ಕುಲ ವಿವೇಕ್ಷಣೆ ಅಂದು ಕಂಡುಕೊಂಡ ವಿಚಾರದ ಬೆಳಕನ್ನು ಇಂದಿನ ವಿಶ್ವಸಂಸ್ಥೆಯು ಜಗದ ರಾಷ್ಟ್ರಗಳಿಗೆ ನೀಡುವ ವ್ಯಕ್ತಿಸ್ವಾತಂತ್ರ್ಯದ ನಿಲುವಿನಲ್ಲಿ ಜನಾಂಗ, ಬಣ್ಣ, ಭಾಷೆ, ಲಿಂಗ ಮತಗಳನ್ನು ಹೊರಚಾಚಿ ವಿಶ್ವ ಭ್ರಾತೃತ್ತ್ವದ ಸಂದೇಶದ ವಿಧಿಯನ್ನು ನೀಡಿರುವ ದಿಸೆಯಲ್ಲಿ ಕಾಣುತ್ತೇವೆ.

ಆ ಸಂದೇಶದ ವಿಧಿಗೆ, ವಿಶೇಷತಃ ಅವರ ಈ ಕೆಳಗಿನ ಕೀರ್ತನೆಗಳು/ಗೀತೆಗಳು ಅತ್ಯಂತ ಪೂರಕವಾದ ಸಮಭಾವದ ಸತ್ತ್ವವನ್ನು ನೀಡುತ್ತವೆ. ಜಾಗತಿಕ ಸತ್ಯವನ್ನು ಬಿಚ್ಚಿಡುತ್ತವೆ :

“ಏತರವನೆಂದು ಪೇಳಲಿ–ಜಗ
ನ್ನಾಥ ಮಾಡಿದ ನನ್ನ ನರ ರೂಪಕಾಯವ ॥ ಪ ॥
ಮುಟ್ಟು ಹುಟ್ಟಿನೊಳು ನೆಟ್ಟನೆ ನಾ ಬಂದೆ ।
ತೊಟ್ಟಿದ್ದೆನಾಗ ತೊಗಲ ಬೊಕ್ಕಣ ॥
ಇಷ್ಟರೊಳಗೆ ಒಂದು ವಿವರವನರಿಯದ ।
ಭ್ರಷ್ಟಗೆ ನನಗೆ ಇನ್ನೇತರ ಕುಲವೊ ? ॥ ೧ ॥
ಇಂದ್ರಿಯ ಸೂತಕ ದುರ್ಗಂಧದ ಮಲಮೂತ್ರ ।
ನಿಂದ ಠಾವಿಲಿ ತನ್ನ ನಿಜವರಿಯದೆ ॥
ಬಂದದ್ದು ಬಚ್ಚಲ ಕುಣಿ ತಿಂದದ್ದು ಮೇಲೆ ಮಾಂಸ–ಇಂಥ
ನಿಂದಕಗೆ ನನಗೆ ಏತರ ಕುಲವೊ ? ॥ ೨ ॥
ಒಂಬತ್ತು ಹೆಜ್ಜದ ತನುವಿನ ಹೊಲಸಿನೊಳ್ ।
ತುಂಬಿತುಂಬಿದೇಹ ತುಳುಕುತಿದೆ ॥
ಇಂಬಿಲ್ಲವಿದರೊಳು ಇಂದು ಪುಳುವಿನಕೊಂಡ–ಇಂಥ
ಡಂಭಕ ನನಗೆ ಇನ್ನೇತರ ಕುಲವೊ ? ॥ ೩ ॥

ಎಲುವು ಖಂಡರೋಹಿತ ನರ ಪಂಜರ
ಪಳುವಿನೊಳಗೆ ನಮ್ಮ ಕುಲವ ಕೇಳುವರೆ ?
ಬಲಿದ ಚರ್ಮ ರಕ್ತ ಹೊತ್ತು ತಿರುಗುವ ಶುದ್ಧ
ಹೊಲೆಯಗೆ ನನಗೆ ಇನ್ನೇತರ ಕುಲವೊ ॥ ೪ ॥

ಹಚ್ಚಡದ ಮೇಲೊಂದು ಲಚ್ಚಿಗೆಯಿಟ್ಟಂತೆ
ಹೆಚ್ಚು ಕುಂದಿಗೆ ಲೋಕ ಹೆಣಗಾಡುತ
ನಿಶ್ಚಿತ ಕಾಗಿನೆಲೆಯಾದಿ ಕೇಶವನ
ಹುಚ್ಚಗೆ ನನಗೆ ಇನ್ನೇತರ ಕುಲವೊ ॥ ೫ ॥

ಈ ಸತ್ಯವನ್ನು ಅರಿತ ಮೇಲಿನ ಮಂದಿನ ದರ್ಶನ;
"ಕುಲಕುಲ ಕುಲವೆನ್ನುತಿಹರೊ
ಕುಲವಾವುದು ಸತ್ಯ ಸುಜನರಿಗೆ ॥ ಪ ॥

ಕೆಸರೊಳು ತಾವರೆಪುಟ್ಟಲು ಅದ ತಂದು
ಕುಸಮನಾಥನಿಗೆ ಅರ್ಪಿಸಿರೇನಯ್ಯ
ಪಶುವಿನ ಮಾಂಸದೊಳುತ್ಪತ್ತಿ ಕ್ಷೀರವ
ವಸುಧೆಯೊಳಗೆ ಭೂಸುರರುಣ್ಣರೇನಯ್ಯ ॥ ೧ ॥

ಆ ಶೌಂಡಲ್ಯ ಪರಾಶರ ಎನಿಪನು
ವೇಶ್ಯೆಯ ಪುತ್ರ ವಸಿಷ್ಟಮುನಿ
ದಾಸಿಯ ನಂದನ ನಾರದ ಎನಿಪನು
ಕೌಶ್ಯಪ ಪೌತ್ರನ ಕುಲ ಹೇಳಿರಯ್ಯ ॥ ೨ ॥

ಆತ್ಮನಾವಕುಲ ಜೀವನಾವಕುಲ
ತತ್ತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ್ಮನು ಕಾಗಿನೆಲೆಯಾದಿ ಕೇಶವನೊಲಿವ
ಭಕ್ತರಿಗೆ ಕುಲವಾವುದು ಹೇಳಿರಯ್ಯ" ॥ ೩ ॥

ಆ ದರ್ಶನವನ್ನು ಇನ್ನಷ್ಟು ತಿಳಿಗೊಳಿಸುವ, ಬೆಳ್ಗೊಳಗೊಳಿಸುವ
ಜಗಮೆಚ್ಚುವ ರೀತಿಯನ್ನು ಮುಂದೆ ನೋಡಿ :
"ಕುಲಕುಲ ಕುಲವೆಂದು ಹೋರಾಡದಿರಿ ನಿಮ್ಮ ।
ಕುಲದ ನೆಲೆಯನೇನಾದರೂ ಬಲ್ಲಿರಾ ? ॥ ಪ ॥

ಹುಟ್ಟದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ
ಅಟ್ಟು ಉಣ್ಣದ ವಸ್ತುಗಳಿಲ್ಲವೊ ॥

**ಗುಟ್ಟು ಕಾಣಸ ಬಂತು ಹಿರಿದೇನು ಕಿರಿದೇನು**
**ನೆಟ್ಟನೆ ಸರ್ವಜ್ಞನ ನೆನೆಕಾಣೊ ಮನುಜ ॥ ೧ ॥**

**ಜಲವೆ ಸಕಲ ಕುಲಕೆ ತಾಯಿಯಲ್ಲವೆ ಆ ।**
**ಜಲದ ಕುಲವೇನಾದರೂ ಬಲ್ಲಿರಾ ? ॥**
**ಜಲದ ಬೊಬ್ಬುಳಿಯಂತೆ ಸ್ಥಿರವಲ್ಲ ಈ ದೇಹ**
**ನೆಲೆಯನರಿತು ನೀ ಹರಿಯ ನೆನೆ ಮನುಜ ॥ ೨ ॥**

**ಹರಿಯೇ ಸರ್ವೋತ್ತಮ ಹರಿಯೇ ಸರ್ವೇಶ್ವರ**
**ಹರಿಮಯವೆಲ್ಲವೆನುತ ತಿಳಿದು ॥**
**ಸಿರಿ ಕಾಗಿನೆಲೆಯಾದಿ ಕೇಶವರಾಯನ**
**ಚರಣ ಕಮಲವನು ಕೀರ್ತಿಸುವನೆ ಕುಲಜ ॥ ೩ ॥**

ಹೀಗೆ ಸಮಷ್ಟಿಯೇ ದೇವನಾಗಿರುವ ಈಗಿನ ಪ್ರಜಾಪ್ರಭುತ್ತ್ವಗಳ ಸಂಯುಕ್ತ ದರ್ಶನದಲ್ಲಿ ವ್ಯಷ್ಟಿಯ ದತ್ತ ಸ್ವಾತಂತ್ರ್ಯವೇ ಜಗತ್ತಿನ ಮುಂದುವರೆಯುವಿಕೆಯೇ ಮೂಲ ಕಾರಣವಾಗಿ ನಿಂತಾಗ, ಆ ವ್ಯಷ್ಟಿಯೆಂಬವನೇ ಜಗತ್ತಿನ ಸಾಗುವಿಕೆಗೆ ಮೂಲ ಘಟಕನಾಗುತ್ತಾನೆ, ತಳಹದಿಯೂ ಆಗುತ್ತಾನೆ, ಜೀವನದಿಯೂ ಆಗುತ್ತಾನೆ. ಹೀಗೆ ಲೋಕ ಸತ್ವದ ಒಡಬಾನಲವನ್ನು ಹೆಕ್ಕಿ ನೋಡಿದಾಗ ರಾವುಗನ್ನಡಿಗೆ ಆತನ ಮನಸ್ಸೇ ರಣಮಂಡಲ: ಅಲ್ಲಿ ದ್ವಂದ್ವತೆಯಲ್ಲಿ ತುಮುಲ ಯುದ್ಧ; ವಿವೇಕ ಅವಿವೇಕಗಳ ಸಂಘರ್ಷ. ಅಲ್ಲಿ ಸಮಚಿತ್ತವನ್ನು ಆಹ್ವಾನಿಸಿ ವಿವೇಕವು ಬಳಕೆಯಾಗುವಂತೆ ಮಾಡಲು ಅಧ್ಯಾತ್ಮದ ನೆಲೆಗಟ್ಟಿನ ಮೇಲೆ ಸಂಪನ್ನಗೊಂಡಿರುವ ಸತ್ಯ ನಿಷ್ಠುರತೆಯಲ್ಲಿ ಅಭಿವ್ಯಕ್ತವಾಗಿರುವ ಕನಕನ ಸಾಹಿತ್ಯದ ಮಾತುಗಳು ಇಂದಿನ ವಿಶ್ವಸಂಸ್ಥೆಯ ಚಾರ್ಟರಿನ ತತ್ತ್ವಗಳನ್ನು ಬಲಿಷ್ಠಗೊಳಿಸಲು ಪೋಷಕವಾಗಿರುತ್ತವೆ.

ಇದಕ್ಕೆ ಕಾರಣ ಕನಕದಾಸರೊಬ್ಬರು ಜಗತ್ತು ಕಂಡ ಶ್ರೇಷ್ಠ ದಾರ್ಶನಿಕರು. ಮನಸ್ಸುಗಳೊಳಗೆ ಒಬ್ಬ ದಾರ್ಶನಿಕರು ಇದ್ದೇ ಇರುತ್ತಾನೆ. ಮನ್ಸಸ್ಸು ಸಮತೋಲಾವಸ್ಥೆಯಲ್ಲಿದ್ದಾಗ ಆತನ ವಿರಾಟತೆಯ ದರ್ಶನ. ಆದರ್ಶನದ ಲಾಭವನ್ನು ಪಡೆದುಕೊಳ್ಳಲು ಕನಕ ಸಾಹಿತ್ಯವು ಪ್ರೇರಣಾ ಸ್ವರೂಪಿ. ಆನಂದ ಪ್ರಾಪ್ತಿಗೆ ಚೈತನ್ಯದಾಯಿ. ವಿಶ್ವಸಂಸ್ಥೆಯ ಸಂವಿಧಾನಕ್ಕೆ ಸುಂದರ ವ್ಯಾಖ್ಯಾನ ಇಲ್ಲಿದೆ–

ಅದಕ್ಕಾಗಿ

**"ತಲ್ಲಣಿಸದಿರು ಕಂಡೆಯಾ ತಾಳು ಮನವೆ**
**ಸ್ವಾಮಿ ನಿಲ್ಲದಲೆ ರಕ್ಷಿಸುವ ಸಂದೇಹ ಬೇಡ**
**"ಮಂಗನಂತೆ ಭವ ಭಂಗ ಪಡುವ ನಾವು**

–ದಾಸರಾಗಬೇಕು; ಕನಕ ನೀ ದಾಸನಾದ
ರೀತಿಯಲ್ಲಿ ನಮ್ಮನ್ನೆಲ್ಲ ನಡೆಸೋ
"ಅಹುದಾದರಹುದೆನ್ನಿ ಅಲ್ಲವಾದರೆ ಅಲ್ಲವೆನ್ನಿ
ಬಹು ಜನರು ನೆರೆ ತಿಳಿದು ಪೇಳಿ ಮತ್ತಿದನು
"ಆರಿಗೆ ಆರಿಲ್ಲವಯ್ಯ ಆಪತ್ತು ಕಾಲಕ್ಕೆ
ಆರು ಸಂಗಡ ಬಾಹೋರಿಲ್ಲ
ಆರು ಹಿತವರು ಎಂದು ನಂಬಬೇಡ
ಏನು ಬರುವುದೋ ಏನು ಸಂಗಡ ಬರುವುದೋ
(ತೊರೆದು ಜೀವಿಸಬಹುದೆ ಹರಿ ನಿನ್ನ ಚರಣಗಳ)
"ನಾನು ನೀನು ಎನ್ನದಿರೊ ಹೀನ ಮಾನವ
ಸತ್ಯವಂತರ ಸಂಗವಿರಲು ತೀರ್ಥವ್ಯಾತಕೆ
"ತಾನಾರು ತನ್ನ ದೇಹಯಾರು

ಇತ್ಯಾದಿ ಕನಕದಾಸರ ಉಕ್ತಿಗಳನ್ನು ವ್ಯಷ್ಟಿ ವ್ಯಷ್ಟಿಯು ಮನನ ಮಾಡಿಕೊಂಡು ಆತ್ಮ ವಿಮರ್ಶೆಗೆ ತೊಡಗಿ ಅವನು ವಿಶ್ವಮಾನವನಾಗುವ ಅರ್ಹತೆಯನ್ನು ಪಡೆದು ವಿಶ್ವಸಂಸ್ಥೆಯ ಸಂವಿಧಾನದ ಎಲ್ಲ ಪರಿಚ್ಛೇದದ ಉಕ್ತಿಗಳಿಗೆ ದರ್ಶನನಾಗಿ ನಿಂತು–ವಿಶ್ವದ ಸರ್ವತೋಮುಖ ವಿಕಾಸದಲ್ಲಿ ಕಾರಣೀಭೂತನಾಗುತ್ತಾನೆ. ಇಂತಹ ಸಂಸ್ಕಾರವು ವ್ಯಷ್ಟಿ ವ್ಯಷ್ಟಿಗಳಲ್ಲಿ ವಿಸ್ತಾರವಾದಂತೆ ವಿಶ್ವವೆಲ್ಲ ನೆಮ್ಮದಿಯ ಶಾಂತಿವನವಾಗುತ್ತದೆ.

ವಿಶೇಷತಃ ಭಾರತೀಯರಾದ ನಾವು ಇದೇ ಬೆಳಕಿನಲ್ಲಿ ನಮ್ಮ ಭಾರತದ ಸಂವಿಧಾನದ ಪ್ರಿಯಾಂಬಲ್ (ಪ್ರಸ್ತಾವನೆ) ಅನ್ನು ನೆನಿಸಿಕೊಂಡು ಅಲ್ಲಿಯೂ ಕನಕದಾಸರ ಸಾಹಿತ್ಯವು ತುಂಬಿಕೊಂಡ ವಿಶ್ವಭ್ರಾತೃತ್ತ್ವದ ನೆಲೆಗಳನ್ನು ಅವರ ಅನುಭಾವದಲ್ಲಿ ನಮ್ಮ ನಡೆ ನುಡಿಗಳಿಗೆ ಪ್ರೇರಣೆಯನ್ನು ಪಡೆದು ಪೂರ್ಣಮಾನವರಾಗಬೇಕಾದುದು ಮುಖ್ಯವಾಗುತ್ತದೆ.

ನಮ್ಮ ಭಾರತದ ಸಂವಿಧಾನದ ಪ್ರಿಯಾಂಬಲ್ ಮಂತ್ರವನ್ನು ಒಂದಿಷ್ಟು ಸ್ಮರಣೆಗೆ ಈಗಲೂ ತಂದುಕೊಳ್ಳೋಣ.

"We the people of India, having Solomanly Resolved to constitute India into a (sovereign socialist secular Democratic Republic) and to secure to all citizens.

Justice, Social, Economic and Political; Liberty of thought, expression, belief, faith and worship;

Equality of status and apportunity; and promote among them, all

Fraternity assuring the dignity of the individual and the (Unity and integrity of the Nation).

In our Constituent Assembly this twenty sixth day of November 1949, Do hereby Adopt and give to ourselves this constitution.

ಇದನ್ನು ಪುನರ್ ಪುನರ್ ಉಚ್ಚರಿಸಿದಂತೆ ನಾವು ವ್ಯಷ್ಟಿ–ಸಮಷ್ಟಿ ಎಂದರೆ ದಾಸ–ಈಶ ತತ್ತ್ವದ ಅನುಷ್ಠಾನ ಮತ್ತು ಅದರ ಪರಿಣಾಮದಲ್ಲಿ ವ್ಯಷ್ಟಿಯ ಸದಸದ್ವಿವೇಕದಲ್ಲಿಯ ಬೆಳವಣಿಗೆಯೇ ಸಮಷ್ಟಿಯಾದ ವಿಶ್ವದಲ್ಲಿಯ ಜೀವನೋಲ್ಲಾಸ. ಅದೇ ವಿಶ್ವಸಂಸ್ಥೆಯ ಸಂವಿಧಾನವು ತುಂಬಿಕೊಂಡಿರುವ ಆಶಾದಿಸೆ. ಆ ಗುರಿ, ಕನಕದಾಸರಂತಹ ವಿಶ್ವಚೇತನರ ಅನುಭವದ ನುಡಿಗಳನ್ನು ಅರ್ಥೈಸಿಕೊಂಡು, ಬದುಕನ್ನು ಸಾರ್ಥಕ ಮಾಡಿಕೊಳ್ಳುವುದರಲ್ಲಿದೆ.

ಅದಕ್ಕಾಗಿ ಸಂವಿಧಾನದ ಹಿನ್ನೆಲೆಯಲ್ಲಿ ಕನಕದಾಸರಂತಹ ದಾರ್ಶನಿಕರ ಮಾತುಗಳನ್ನು ಮನನಮಾಡಿಕೊಂಡು ನಡೆಯುವುದು ಉತ್ತಮ ಮಾರ್ಗವಾಗುತ್ತದೆ. ಆ ನಡೆಯಲ್ಲಿ ಆಪ್ಯಾಯ ಮಾನವಾದ ಬದುಕಿಗೆ ನೆಮ್ಮದಿ. "ಸರ್ವ ಜೀವ ರಕ್ಷಣೆ ಮಂಗಲ"ವೂ ಕೂಡ.



ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೩

# ೪. ವಿದ್ಯಾಪತಿ ಬಿಲ್ಹಣನ ಪ್ರವರ

-ಡಾ॥ ಅರವಿಂದ ಚಂದ್ರಕಾಂತ ಶ್ಯಾನಭಾಗ*

ಸಾಂಸ್ಕೃತಿಕವಾಗಿ ಶ್ರೀಮಂತ ಭಾಷೆಯಾಗಿರುವ ಸಂಸ್ಕೃತ ಸಾಹಿತ್ಯದಲ್ಲಿ ಕಾಳಿದಾಸ, ಭಾಸ, ಭಾರವಿ, ಮಾಘ, ಶೂದ್ರಕ, ಭವಭೂತಿ, ಶ್ರೀಹರ್ಷ, ಅಶ್ವಘೋಷ, ವಿಶಾಖದತ್ತ, ಭಟ್ಟನಾರಾಯಣ ಮುಂತಾದ ಹಲವಾರ ಮಹಾಕವಿಗಳು, ನಾಟಕಕಾರರು ತಮ್ಮ ಅಮೋಘವಾದ ಕಾವ್ಯರಚನೆಯಿಂದ ಜಗತ್ತಿನ ಜನರ ಮನವನ್ನು ಸೂರೆಗೊಂಡಿದ್ದಾರೆ. ಇವರ ಪಂಕ್ತಿಯಲ್ಲೇ ನಿಲ್ಲಬಲ್ಲ ಇನ್ನೂ ಅನೇಕ .ಮಹಾಕವಿಗಳಲ್ಲಿ 'ಬಿಲ್ಹಣ'ನು ಒಬ್ಬನಾಗಿದ್ದಾನೆ. ಅದೆಷ್ಟೋ ಓದುಗರಿಗೆ 'ವಿಕ್ರಮಾಂಕದೇವಚರಿತ' ಐತಿಹಾಸಿಕ ಮಹಾಕಾವ್ಯದ ಕುರಿತಾಗಿ ತಿಳಿದಿದೆ. ಆದರೆ ಕವಿಯ ಕುರಿತಾಗಿ ಏನೂ ಗೊತ್ತಿಲ್ಲ ಎನ್ನುವಂತಿದೆ. ಆರನೇ ವಿಕ್ರಮಾದಿತ್ಯನಲ್ಲಿ ರಾಜಾಶ್ರಯ ಪಡೆದ ಸಂದರ್ಭದಲ್ಲಿ ಕಲ್ಯಾಣಿ ಚಾಲುಕ್ಯರ ವಂಶದ ಪ್ರತಾಪಿಯಾದ ರಾಜಕುಮಾರ ವಿಕ್ರಮನ ಕುರಿತಾಗಿ ರಚಿಸಿದ ಕಾವ್ಯವೇ ವಿಕ್ರಮಾಂಕದೇವಚರಿತೆಯಾಗಿದೆ. ಇದರ ರಚನಾಕಾರ ಬಿಲ್ಹಣನ ಕೌಟುಂಬಿಕ ವಿವರಗಳ ಲಭ್ಯತೆ ಸಾಧ್ಯವಿಲ್ಲದಿದ್ದರೂ ಸಿಗುವ ಅಲ್ಪಸ್ವಲ್ಪ ಮಾಹಿತಿ ಮಹಾಕವಿಗೆ ವಿದ್ಯಾಪತಿ ಬಿರುದು ಲಭ್ಯವಾದ ಬಗ್ಗೆ ತಿಳಿಸುತ್ತದೆ.

**ನೀಲಛತ್ರೋನ್ಮದಗಜಗಟಾಪಾತ್ರಮುತ್ರಸ್ತ ಚೋಲಾ ।**
**ಚಾಲುಕ್ಯೇಂದ್ರಾದಲಭತ ಕೃತೀ ಯೋऽತ್ರ ವಿದ್ಯಾಪತಿತ್ವಮ್ ॥**

ವಿದ್ಯಾಪತಿ ಉಪಾಧಿಯ ಜೊತೆ ಬೆಳ್ಗೊಡೆಗಳ ಸಮೇತವಾದ ಮದೋನ್ಮತ್ತಗಜ, ರಾಜ್ಯಲಕ್ಷ್ಮಿಯನ್ನೇ ಧಾರೆಯೆರೆದುದಾಗಿ ಈ ಶ್ಲೋಕವು ಸಾರುತ್ತದೆ. ಇದೇ ಕೃತಿಯ ೧೮ನೇ ಸರ್ಗದ ೧೦೮ ಶ್ಲೋಕಗಳಲ್ಲಿ ಕವಿಯು ತನ್ನ ಪೂರ್ವಜರು, ಜನ್ಮಸ್ಥಾನ,

* ಪೋಸ್ಟ್:ಕೋಡಕಣಿ, ತಾಲ್ಲೂಕು : ಕುಮಟಾ, ಜಿಲ್ಲಾ : ಕಾರವಾರ-೫೮೧ ೪೪೦.

ಕಾಶ್ಮೀರದ ವರ್ಣನೆ, ದೇಶ ಸಂಚಾರದ ವಿಷಯ ನಿರೂಪಣೆಗೆ ಮೀಸಲಾಗಿಟ್ಟಿರುವ ಅಂಶವು ನಮ್ಮ ಗಮನಕ್ಕೆ ಬರುತ್ತದೆ.

ಮಹಾಕವಿ ಬಿಲ್ಹಣನ ಜನ್ಮಸ್ಥಾನವು ಕಾಶ್ಮೀರ ಸಮೀಪದ ಪ್ರವರಪರ ಪ್ರದೇಶ. ಇಲ್ಲಿ ಖೋನಮುಖವೆನ್ನುವ ಪ್ರಸಿದ್ಧ ಗ್ರಾಮವಿದೆ. ಇಂದಿಗೂ ಕೂಡ ಖೋನಮುಖವು ವಿತಸ್ತಾ ನದಿತೀರದ ತಕ್ಷಕ ಕುಂಡದ ಬಳಿಯಿದ್ದು ಅದರ ಪೌರಾಣಿಕ ಹಿನ್ನೆಲೆ ಹೀಗಿದೆ.

**ಕಾಶ್ಮೀರೇಷು ಪ್ರವರಪುರ ಮಿತ್ಯಸ್ತಿ ಮುಖ್ಯಂ ಪುರಾಣಾಂ**
**ಯಾತಂ ಗೌರೀಪರಿಣಯವಿಧೌ ಸಾಕ್ಷಿತಾಮಿಂದುಮಾಲೇಃ ।**
**ಯಸ್ಯಾಯಾಂತಿ ಪ್ರಕೃತಿಕುಟಲಾಸ್ತೇ ವಿತಸ್ತಾತರಂಗಃ**
**ಸ್ವೇಚ್ಛಾಧಾವತ್ಕಲಿಯುಗ ಗಜಥೋರಣತ್ವೇ ಅಂಕುಶತ್ವಮ್ ॥**

ಕಾಶ್ಮೀರದಲ್ಲಿರುವ ಪ್ರವರಪುರವು ಶಿವಪಾರ್ವತಿಯರ ವಿವಾಹಮಹೋತ್ಸವಕ್ಕೆ ಸಾಕ್ಷಿಯಾಗಿತ್ತು. ಕಲಿಯುಗವೆಂಬ ಆನೆಗೆ ಇದು ಮಾವುತನಂತೆ ಇದ್ದು ಸ್ವಾಭಾವಿಕ ವಕ್ರತೆಯಿಂದ ಪ್ರವಹಿಸುವ ವಿತಸ್ತಾನದಿ ತರಂಗಗಳು ಈ ಪ್ರವರಪುರದ ಅಂಕುಶದಂತಿವೆ. ಫಲ-ಪುಷ್ಪಗಳಿಂದ ತುಂಬಿದ ಉದ್ಯಾನ, ಉನ್ನತವಾದ ಸೌಧಗಳಿಂದ ಕೂಡಿದ್ದ ನಗರವು ಸೌಂದರ್ಯಭರಿತವಾಗಿತ್ತು. ಇದೊಂದು ವಿದ್ಯಾಕೇಂದ್ರ ಆಗಿದ್ದು ಸ್ವತಃ ಸರಸ್ವತಿಯೇ ನೆಲೆಸಿದ್ದಳು ಎನ್ನವುದು ಶ್ಲೋಕದಿಂದ ತಿಳಿಯುತ್ತದೆ.

**ಯಸ್ಯಾಸ್ತಿ ಖೋನಮು ಇತ್ಯುಪಕಂಠಸೀಮ್ನಿ**
**ಗ್ರಾಮಃ ಸಮಗ್ರುಗುಣಸಂಪದ ವಾಪ್ತ ಕೀರ್ತಿಃ ।**

ಖೋನಮುಖವು ಅಧಿಕ ಪ್ರಮಾಣದಲ್ಲಿ ಕೇಸರ ಮತ್ತು ಅಂಗೂರವನ್ನು ಉತ್ಪಾದಿಸುವ ಗ್ರಾಮವಾಗಿದ್ದು ಕ್ರಿ.ಶ. ೧೯೪೪ರ ಖೋನಮು ಕಲ್ಲಿನ ಶಾಸನವು ಇದೊಂದು ಅಗ್ರಹಾರವಾಗಿತ್ತೆಂದು ತಿಳಿಸಿದೆ.

ಖಗೇಂದ್ರರಾಜ ಮತ್ತು ಉತ್ತರಾಧಿಕಾರಿಗಳಾದ ಮಯೂರ, ಅಶೋಕ ಮುಂತಾದವರು ಇಲ್ಲಿ ಆಳ್ವಿಕೆ ನಡೆಸಿದ್ದು ಇತಿಹಾಸದಲ್ಲಿದೆ. ಖೋನಮುಖವು ವೇದಶಾಸ್ತ್ರ ಪರಿಣತರಿಂದ ಕೂಡಿಕೊಂಡು ಧರ್ಮಪ್ರಸಾರಕ್ಕೆ ಯೋಗ್ಯವಾಗಿತ್ತು. ಗೋಪಾದಿತ್ಯನೆನ್ನುವ ಅರಸನು ದೇಶದ ವಿವಿಧ ಮೂಲೆಗಳಿಂದ ಪ್ರಾಜ್ಞರನ್ನು ಕರೆತಂದು ಅನುಷ್ಠಾನಕ್ಕೆ ಅವಕಾಶ ಕಲ್ಪಿಸಿದ್ದನು. ಈ ಬ್ರಾಹ್ಮಣಶ್ರೇಷ್ಠ ಕುಲಕ್ಕೆ ಸೇರಿದವರಾಗಿದ್ದರು ಬಿಲ್ಹಣನ ಪೂರ್ವಜರು. ಇವರಲ್ಲಿ ಪ್ರಥಮನಾದ ಮುಕ್ತಿಕಲಶನು ಮುತ್ತಾತನಾಗಿ ಬ್ರಾಹ್ಮಣ ಸಂಕುಲಕ್ಕೆ ಕುಲಪತಿಯಾಗಿದ್ದನು. ಶೈವ ಕೌಶಿಕ ಗೋತ್ರದ ಇವರು ಧರ್ಮಪರಾಯಣರಾಗಿ ವ್ಯಾಕರಣ ಮತ್ತು ಅಲಂಕಾರ ಶಾಸ್ತ್ರಕ್ಕೆ ಆದ್ಯತೆಯನ್ನು ನೀಡಿದವರಾಗಿದ್ದರು.

**ಕರ್ತುಂ ಕೀರ್ತಿಪ್ರಣಯಿ ಕುಶಲಾಃ ಕೌಶಿಕಂ ಗೋತ್ರಮುಚ್ಚೈಃ**

**ಸ್ತತ್ರ ಬ್ರಹ್ಮಣಪ್ರವಣ ಮನಸೋ ಬ್ರಾಹ್ಮಣಾಃ ಕೇಚಿದಾಸನ್ ।**

ಮುಕ್ತಿಕಲಶನು ತನ್ನ ಸದ್ಗುಣಗಳಿಂದಾಗಿ ತ್ರಿಲೋಕಗಳನ್ನೂ ಪಾವನಗೊಳಿಸುವ ಬ್ರಾಹ್ಮಣತ್ವವನ್ನು ಸಂಪಾದಿಸಿದ್ದನು. ಅಗ್ನಿಹೋತ್ರದ ಸಂದರ್ಭದಲ್ಲಿ ಅವನ ಶರೀರದಿಂದ ಹೊರಟ ಬೆವರಿನ ಧಾರೆಯು ಕಲಿಯುಗದ ಕಲ್ಮಶ ರೂಪದ ಕೊಳೆಯನ್ನು ತೊಳೆದುಹಾಕಿತು. ನಾಲ್ಕು ವೇದಗಳು ಬಂದು ಇವನ ಮುಖದಲ್ಲಿ ನೆಲೆನಿಂತವು. ಬೇರೆ ಬೇರೆ ಮುಖಗಳಲ್ಲಿ ವೇದವನ್ನು ಧರಿಸಿದ ಚತುರ್ಮುಖ ಬ್ರಹ್ಮನೆದುರು ಮುಕ್ತಿಕಲಶನು ಒಂದೇ ಮುಖದಲ್ಲಿ ಚತುರ್ವೇದಗಳನ್ನು ಧರಿಸಿದ್ದು ವಿಶಿಷ್ಟವೆನಿಸಿದೆ.

**ದಾತಾ ಪರಾಕ್ರಮಧನಃ ಶ್ರುತಪಾರದೃಶ್ವಾ**

**ನಾಮ್ನಾಸ್ಯ ರಾಜಕಲಶಸ್ತನಯೋ ಬಭೂವ ।**

ಮುಕ್ತಕಲಶನ ಮಗನಾಗಿ ರಾಜಕಲಶನ ಜನ್ಮವಾಯಿತು. ಇವನೂ ಸಹ ಅಪ್ಪನಂತೆಯೇ ವಿದ್ವಾಂಸನಾಗಿದ್ದು ಧಾರ್ಮಿಕ ಕಾರ್ಯಗಳಲ್ಲಿ ಆಸಕ್ತಿ ತಳೆದಿದ್ದು, ದಾನ , ಧರ್ಮಾಚರಣೆಯಲ್ಲಿ ಹೆಸರು ಮಾಡಿದ್ದನು. ಸಕಲ ಶಾಸ್ತ್ರ ಪಾರಂಗತನೆನಿಸಿದ್ದ. ಜನೋಪಯೋಗಕ್ಕೆ ನೀರಿಲ್ಲದ ಪ್ರದೇಶಗಳಲ್ಲಿ ಬಾವಿ ಝರಿಗಳನ್ನು ನಿರ್ಮಿಸಿ ಅನುಕೂಲ ಮಾಡಿಕೊಟ್ಟಿದ್ದಾನೆ. ರಾಜಕಲಶನ ಮಗನಾದ ಜ್ಯೇಷ್ಠಕಲಶನು ವ್ಯಾಕರಣಶಾಸ್ತ್ರ, ವೇದಾಲಂಕಾರಗಳಲ್ಲಿ ಪ್ರಭುತ್ವ ಸಾಧಿಸಿದ್ದನು.

**ಮಹಾಭಾಷ್ಯ ವ್ಯಾಖ್ಯಾಮಖಿಲ ಜನವಂದ್ಯಾ ಮದಧತಃ ।**

**ಸದಾ ಯಸ್ಯಾಚ್ಛಾತ್ರೈಸ್ತಿಲಕಿತಮಭೂತ್ತಾಂ ಗಣಮಪಿ ॥**

ಪತಂಜಲಿಯ ಮಹಾಭಾಷ್ಯಕ್ಕೆ ಟೀಕೆಯನ್ನು ಬರೆದ ಜ್ಯೇಷ್ಠಕಲಶನು ಐಹಿಕ–ಆಮುಷ್ಮಿಕವೆರಡರಲ್ಲೂ ಪ್ರವೀಣನಾಗಿದ್ದ. ಈತನ ಧರ್ಮಪತ್ನಿ ನಾಗಾದೇವಿಯು ಪತಿಗೆ ಯಜ್ಞಯಾಗಾದಿ ಧರ್ಮಕಾರ್ಯಗಳಿಗೆ ಸಹಕಾರ ನೀಡುತ್ತ ಅತಿಥಿ ಸತ್ಕಾರ ಇನ್ನಿತರ ಸೇವಾಕಾರ್ಯಗಳಿಂದ ಪತಿಗೆ ಅನುರೂಪದ ಸತಿಯಾಗಿದ್ದಳು. ಇವರ ದಾಂಪತ್ಯದ ಫಲವಾಗಿ ಇಷ್ಟಾರಾಮ, ಬಿಲ್ಹಣ ಮತ್ತು ಆನಂದರೆನ್ನುವ ಮೂವರು ಮಕ್ಕಳ ಜನನವಾಯಿತು.

ಬಿಲ್ಹಣನ ಅಗ್ರಜನಾದ ಇಷ್ಟಾರಾಮ ಮತ್ತು ಅನುಜನಾದ ಆನಂದ ಇವರುಗಳು ವಿದ್ವಾಂಸ ಮತ್ತು ಕವಿಯಾಗಿದ್ದರಿಂದ ರಾಜಸಭೆ ಗೋಷ್ಠಿಯಲ್ಲಿ ಪೂಜನೀಯರಾಗಿರುತ್ತಿದ್ದರು.

ಈ ಕುರಿತು ಹೆಚ್ಚಿನ ಮಾಹಿತಿ ಲಭ್ಯವಿಲ್ಲದಿದ್ದರೂ ಮಧ್ಯಮಪುತ್ರನಾದ ಬಿಲ್ಹಣನು ಅಪ್ಪನಂತೆ ಅಲಂಕಾರ, ವ್ಯಾಕರಣ ಶಾಸ್ತ್ರದಲ್ಲಿ ನೈಪುಣ್ಯತೆ ಪಡೆದು ಇತಿಹಾಸದ ಅಂಶಗಳ ನಿರೂಪಣೆಯಲ್ಲಿ ಒಬ್ಬ ಇತಿಹಾಸಕಾರನಂತೆ ಕಾಣುತ್ತಾನೆ.

**ಸಾಂಗೋ ವೇದಃ ಫಣಿಪತಿದಿಶಾ ಶಬ್ದಶಾಸ್ತ್ರೇ ವಿಚಾರಃ ।**

**ಪ್ರಾಣಾ ಯಸ್ಯ ಶ್ರವಣಸುಭಗಾ ಸಾ ಚ ಸಾಹಿತ್ಯ ವಿದ್ಯಾ ॥**

ಕುಶಾಗ್ರಮತಿಯ ಬಿಲ್ಹಣನು ಉಪನಯನದ ಸಮಯದಲ್ಲೇ ಸಾಂಗವೇದ, ಸಾಂಗ ವ್ಯಾಕರಣದ ಜೊತೆಯಲ್ಲಿ ದರ್ಶನಗಳನ್ನೂ, ಸಾಹಿತ್ಯಶಾಸ್ತ್ರವನ್ನೂ ವಶೀಕರಿಸಿಕೊಂಡಿದ್ದನು. ಖೋನಮುಖ ಗ್ರಾಮದಲ್ಲೇ ಅಪ್ಪನ ನೇತೃತ್ವದಲ್ಲಿ ಶಾಸ್ತ್ರಾಧ್ಯಯನವನ್ನು ಪೂರೈಸಿ ಪ್ರಕಾಂಡ ಪಂಡಿತನಾದನು. ಚತುಷಷ್ಠಿ ಕಲೆಗಳಲ್ಲಿಯೂ ವಿಶೇಷವಾದ ಪ್ರಾವೀಣ್ಯತೆಯನ್ನು ಪಡೆದಿದ್ದನು. ಸರಸ್ವತಿಯ ಕೃಪೆಯಿಂದ ಬಿಲ್ಹಣನು ಸಂಸ್ಕತ ಸಾಹಿತ್ಯದಲ್ಲಿ ಅನುಪಮವಾದ ಕೃತಿಗಳನ್ನು–

ವಿಕ್ರಮಾಂಕದೇವಚರಿತ – ಮಹಾಕಾವ್ಯ
ಕರ್ಣಸುಂದರೀ – ನಾಟಿಕಾ
ಚೋರಪಂಚಾಶಿಕಾ – ಭಾವಗೀತ ಸಂಗ್ರಹ
ಶಿವಸ್ತುತಿಸ್ತೋತ್ರ
ರಾಮಚರಿತ ಕಾವ್ಯ
ಸುಭಾಷಿತಗುಚ್ಛ

ರಚಿಸಿ ಸಾರಸ್ವತ ಲೋಕದಲ್ಲಿ ಅಜರಾಮರನಾಗಿದ್ದಾನೆ. ಐತಿಹಾಸಿಕ ಮತ್ತು ಭಕ್ತಿಪ್ರಧಾನವಾದ ರಚನೆಗಳಿಂದ ಆಸ್ವಾದಯೋಗ್ಯವಾದ ಸರಳ ಶ್ಲೋಕಗಳಿರುವ ಈ ಕಾವ್ಯಗಳೆಲ್ಲವೂ ಬಿಲ್ಹಣನ ಸಹೃದಯತ್ವವನ್ನು ಮನುಕುಲಕ್ಕೆ ಪರಿಚಯಿಸುತ್ತಿವೆ.

■

ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೩

# ಡಾ. ಬಿ.ಎ.ಸನದಿಯವರ ‘ಹೊಸಶಬ್ದದ ಸಂಸಾರ’ ದೊಂದಿಗೆ

–ಡಾ. ಪ್ರಮೀಳಾ ಮಾಧವ್*

ಸರಳತೆ, ಸಹಜತೆ ಮತ್ತು ಸೌಂದರ್ಯ–ಇವುಗಳ ಸಂಗಮವೇ ಸನದಿ ಕಾವ್ಯ.ಯಾವ ಪಂಥ, ಪಂಗಡ, ತಂತ್ರ, ಮಂತ್ರಗಳಿಗೂ ಬದ್ಧರಾಗದೆ ಕಾಲಕಾಲಕ್ಕೆ ಬದುಕು, ಅನುಭವ, ಅರಿವುಗಳು ನೀಡಿದ ಸಮೃದ್ಧ ಜೀವನಸೂತ್ರಗಳನ್ನು ಶಿಷ್ಟಭಾಷೆಯ ಸೊಗಸು, ಸೊಗಡಿನೊಂದಿಗೆ ಕುದಿಗೊಳಿಸಿ ಅಪ್ಪಟ ಕಾವ್ಯರಸವಾಗಿಸಿ ಸಹೃದಯರಿಗೆ ಉಣಬಡಿಸುವ ಸಹಜ ಕವಿ, ಸಿದ್ಧಕವಿ ಬಿ.ಎ.ಸನದಿಯವರು.ಪ್ರತಿಮೆ, ಸಂಕೇತಗಳ ಕ್ಲಿಷೆಯಿಲ್ಲದ ಬೆಡಗು, ವಿಡಂಬನೆಗಳ ಗೋಜಲುಗಳಿಲ್ಲದ ಅವರ ಕಾವ್ಯಾರಾಮದಲ್ಲಿ ಬೆಳದಿಂಗಳ ಆಪ್ಯಾಯಮಾನವಿದೆ, ಹೊಂಬಿಸಿಲಿನ ಬಿಸುಪಿದೆ, ಅರಳುವ ಮಲ್ಲಿಗೆಯ ಕಂಪಿದೆ.ಮನಸ್ಸು, ಭಾವಗಳನ್ನು ತುಂಬುವ ಅನುಭವದ ರಸದೌತಣವಿದೆ.ಹೃದಯವನ್ನು ಆರ್ದ್ರಗೊಳಿಸುವ ಕಟುವಾಸ್ತವದ ನೋವು, ಆದರ್ಶದ ಕನಸು, ಮಾನವಪ್ರೀತಿಯ ಹಪಾಹಪಿಗಳಿವೆ. ಜಾತಿ, ಮತ, ಪಂಥಗಳಿಂದ ಮುಕ್ತವಾದ ಸುಸಂಸ್ಕೃತವಾದ, ಶ್ರೀಮಂತವಾದ ಸಮಾಜಮುಖೀ ಮನಸ್ಸು ಅತ್ಯಂತ ಆಸ್ಥೆಯಿಂದ, ಜತನದಿಂದ ಆಪ್ತವಾಗಿ ಬಿಚ್ಚಿಕೊಳ್ಳುವುದನ್ನು ಇಲ್ಲಿ ಗಮನಿಸಬಹುದು.

ಸನದಿಯವರ ಕಾವ್ಯಗಂಗೆಯಲ್ಲಿ ಯಾನ ಮಾಡುವುದೇ ಒಂದು ಸೊಗಸಾದ ಅನುಭವ. ಹೃದಯ ಮನಸ್ಸುಗಳು ಭಾವಲೋಕದಲ್ಲಿ ತನ್ಮಯಗೊಂಡು ರಸಾರ್ದ್ರವಾಗಿ ಮತ್ತೆ ಮತ್ತೆ ಆಸ್ವಾದಿಸಬೇಕು ಎಂಬ ಅನಿಸಿಕೆ. ನೀರ್ಬೀಳದ ತುಂತುರು ಹನಿಗಳಂತೆ ಪುಟಿಯುವ ಉತ್ಸಾಹ, ಲವಲವಿಕೆಗಳು ಅವುಗಳಲ್ಲಿವೆ. ಸಕ್ಕರೆ, ಹಾಲು, ಏಲಕ್ಕಿ, ಗೋಡಂಬಿಗಳನ್ನು ಹದವಾಗಿ ಬೆರಸಿ ಮಾಡಿದ ಮಿಠಾಯಿಯನ್ನು ಜಗಿಯುತ್ತಿದ್ದರೆ ಹೇಗೋ ಹಾಗೆ ಪ್ರತಿಯೊಂದು ಕವನದಲ್ಲೂ ಬಾಯಿಚಪ್ಪರಿಸುವಂಥ ಒಂದಲ್ಲ ಒಂದು ಬಗೆಯ ರಸ, ರುಚಿ.

* ‘ಶ್ರೀಧಾಮ್’. ನಂ. ೧೧೪, ವಿಠಲರಾವ್ ಹೌಸಿಂಗ್ ಬೋರ್ಡ್ ಸೊಸೈಟಿ ಲೇಔಟ್. (ಇಸ್ರೋ ಲೇಔಟ್ ಸಮೀಪ) ಚಿಕಾಸಿಪುರ. ಬೆಂಗಳೂರು–೫೬೦ ೦೭೮. ಮೊ. : ೯೮೪೫೫೨೧೬೧೦.

ಸನದಿಯವರನ್ನು ನಮ್ಮ ನಾಡು ಕಂಡ ಬಹುದೊಡ್ಡ ಕವಿಯೆಂದು ಸಹೃದಯ ಲೋಕ ಗುರುತಿಸಿದೆ.ಅವರೊಳಗೆ ಕತೆಗಾರ, ವಿಮರ್ಶಕ, ನಾಟಕಕಾರ, ಅನುವಾದಕ ಇತ್ಯಾದಿ ಬಹುಮುಖ ಪ್ರತಿಭಾಶಕ್ತಿಗಳು ಅಂತರ್ಗತವಾಗಿದ್ದರೂ ಅವು ಪೂರ್ಣಸ್ವರೂಪದಲ್ಲಿ ತೆರೆದುದು ಕವನಲೋಕದಲ್ಲಿ.ಸನದಿಯವರ ಸಮಗ್ರ ಕಾವ್ಯಸಂಪುಟ 'ಸೂರ್ಯಪಾನ'ಕ್ಕೆ ಸಂದ ಮೆಚ್ಚುಗೆ, ಅಭಿನಂದನೆಗಳು ಶ್ರೀಯುತರ ಕಾವ್ಯದೆತ್ತರವನ್ನು ಬಿಂಬಿಸುತ್ತವೆ. ಅಂಥ ಉತ್ಕೃಷ್ಟ ಕವಿಯ ೧೬ನೆಯ ಕವನ ಸಂಕಲನ 'ಹೊಸಶಬ್ದದ ಸಂಸಾರ.'ಅತ್ಯಂತ ಅರ್ಥಗರ್ಭಿತವಾದ ಶೀರ್ಷಿಕೆಯನ್ನೊಳಗೊಂಡ ಈ 'ಹೊಸ ಶಬ್ದದ ಸಂಸಾರ'ದಲ್ಲಿ ದತ್ತುಪುತ್ರರೂ ಸೇರಿ ೫೭ ಜನ ಸದಸ್ಯರಿದ್ದು ಪ್ರತಿಯೊಬ್ಬರಲ್ಲೂ ಸಮೃದ್ಧವಾದ ಜೀವನೋತ್ಸಾಹವಿದೆ; ಮಾನವಪ್ರೀತಿಯಿದೆ.ಅರಿವು, ಅನುಭವಗಳ ವೈವಿಧ್ಯ, ವಿಶಾಲತೆಗಳಿವೆ. ಈ 'ಸಂಸಾರ'ದ ಪರಿಚಿತ ವಲಯದ ಸೀಮಾರೇಖೆಯೊಳಗೆ ಸಂವಾದಗೊಂಡು ಹೃದಯಸ್ಥವಾದ ಆಸ್ವಾದ್ಯ ಅನುಭವಗಳನ್ನು ಸಹೃದಯರೊಂದಿಗೆ ಹಂಚಿಕೊಳ್ಳುವ ಪ್ರಯತ್ನ ಈ ಲೇಖನದ ಉದ್ದೇಶ.

'ಬಲಗೈ ಬೆರಳು' ಈ ಸಂಕಲನದ ಮೊದಲ ಕವನ. ಪ್ರತಿಭೆಯ ಕಾವಿನಲ್ಲಿ ಪಕ್ವಗೊಂಡು ಹರಳುಗಟ್ಟಿದ ಅಂತರಂಗದ ಜೀವನಾನುಭವಗಳು ಹೊರಪ್ರಪಂಚಕ್ಕೆ ತೆರೆದುಕೊಳ್ಳುವ ಸಂದರ್ಭದಲ್ಲಿ ಕವಿಮನಸ್ಸಿನ ತವಕ, ತಲ್ಲಣಗಳು ಇಲ್ಲಿ ಅಪೂರ್ವವಾಗಿ ಹೊಮ್ಮಿವೆ. ಆಂತರ್ಯದಲ್ಲಿ ಸುಪ್ತವಾಗಿದ್ದ ಭಾವನೆಗಳು ಒಳಗಿನಿಂದ ಒತ್ತಿಕೊಂಡು ಬರುವಾಗ ತಿಪ್ಪಹೆಜ್ಜೆ ತಪ್ಪಬಹುದೆಂಬ ಭಯದಲ್ಲಿ ಹೆಜ್ಜೆಯೂರಲು ಹಿಂಜರಿಯುವ ಶಿಶುವಿನಂತೆ ಮನಸ್ಸಿಗೆ ಏನೋ ಉದ್ವೇಗ, ಭಯ, ಕಾತರ. ಹದವಾಗಿ ಬಲಿತ ಭ್ರೂಣ ಮಗುವಾಗಿ, ಮುದವಾಗಿ, ಸಹಜವಾಗಿ ಹೊರಪ್ರಪಂಚಕ್ಕೆ ಕಣ್ದೆರೆಯಬೇಕು. ಹಾಗೆಯೇ ಬಲಿತುನಿಂತ ಭಾವನೆಗಳು ಪದವಾಗಿ ಬೆರಳುಗಳ ಮೂಲಕವೇ ಹೊರಪ್ರಪಂಚಕ್ಕೆ ಬರಬೇಕು. ಆದರೆ ಬೆರಳುಗಳೇ ವಿಫಲವಾದರೆ ಆ ಸಂಕಟ! 'ಬೇಟೆಗಾರನ ಬಾಣ ನೆಟ್ಟು ಹೊರಬಿದ್ದಾಗ ಅರೆಜೀವಗೊಂಡ ಪರಿ ಜಿಂಕೆಯ ಅಳಲು; ಹತ್ತುಜನ ರಸಿಕರನು ನಲಿಸುತ್ತ ನಲಿಯುತ್ತ ಹರಿವ ನೀರಿಗೆ ಬಿದ್ದು ದನಿ ಕಳೆದುಕೊಂಡಂತೆ ಬಿದಿರ ಕೊಳಲು'(ಪು.೧೩) ಎಂಬ ಎರಡು ಸಾರ್ಥಕ ಉಪಮೆಗಳಿಂದ ಅಂತರಾಳದ ಭಾವತೀವ್ರತೆಯನ್ನು ಕಡೆದಿಟ್ಟ ರೀತಿ ಹೃದಯಂಗಮವಾಗಿದೆ. 'ಹೇಳಿದರೆ ಹಾಳಾಗುವುದೋ ಅನುಭವದ ಸವಿಯು, ಹೇಳದಿರೆ ತಾಳಲಾರನೋ ಕವಿಯು', ಕವಿ ಕುವೆಂಪು ಹೇಳಿದ್ದು ಹೀಗೆ.ಕಾವ್ಯಸೃಷ್ಟಿಯೆಂದರೆ ಪ್ರಸವವೇದನೆಯ ಒದ್ದಾಟ. ಸಹಜ ಹೆರಿಗೆ ಸಾಧ್ಯವಾಗದಾಗ ಜೀವಭಾರವನ್ನು ಒಳಗಿಟ್ಟುಕೊಳ್ಳಲಾಗದೆ ಜೀವನ್ಮರಣದ ಸ್ಥಿತಿಯಿಂದ ಹೇಗಾದರೂ (ಸಿಸೇರಿಯನ್)ಹೊರಬಂದು ಶಿಶುವಿನ ಮೊದಲದರ್ಶನದ ಸುಖದ ಸಂವೇದನೆಗಾಗಿ ಹಂಬಲಿಸುವ ತಾಯಿಜೀವದಂತೆ ಅಂತರಾಳದ ಚಡಪಡಿಸುವ

ಭಾವನೆಗಳನ್ನು ಒಳಗಿಟ್ಟುಕೊಳ್ಳಲಾಗದ ಕವಿಗೆ 'ಹಾಡು ಹೊರಹೊಮ್ಮಲಿಕೆ ಬೆರಳೆ ಬೇಕೆಂದಿಲ್ಲ, ಕೊರಳಾದರೂ ಸಾಕು..' (ಪು.೧೪) ಎನಿಸುತ್ತದೆ.

ಮುಂಬೈಯ ಜನನಿಬಿಡ ನಗರ ಹಾಗೂ ಕಡಲತೀರದ ಸುಂದರತಾಣಗಳಲ್ಲಿ ವಿಹರಿಸಿದ ಸನದಿಯವರು ಅಲ್ಲಿನ ರಮ್ಯಮನೋಹರ ದೃಶ್ಯಗಳನ್ನು ಪ್ರತಿಭೆಯ ಕಣ್ಣಿನಲ್ಲಿ ಸೆರೆಹಿಡಿದು ಅದ್ಭುತ ಕವನಗಳನ್ನಾಗಿ ರೂಪಾಂತರಿಸಿದ್ದಾರೆ. ಮುಂಬೈನಗರ ಅವರ ಅನೇಕ ಕವನಗಳಿಗೆ ವಸ್ತುಕೂಡ ಆಗಿದೆ. 'ಬೋರ್ಡಿಯ ಕಡಲ ಕಿನಾರೆ', 'ಕೆಂಪು'ಕವನಗಳಲ್ಲಿ ಸಮುದ್ರತೀರದ ಪ್ರಶಾಂತ ವರ್ಣನೆಗಳಿದ್ದರೆ 'ಮಹಾನಗರದ ಸದ್ದು' ಶಬ್ದಸಂತೆಯ ನಗರಜೀವನಕ್ಕೆ ಕನ್ನಡಿ ಹಿಡಿದಿದೆ. ಮುಂಬೈ ನಗರದ ವೇಗದ ಬದುಕನ್ನು ಕುರಿತು ಅನೇಕ ಕವಿಗಳು ಕವನಿಸಿದ್ದಾರೆ. ಜಿ.ಎಸ್.ಶಿ.ರವರ 'ಮುಂಬೈ ಜಾತಕ' ಸುಪ್ರಸಿದ್ಧ ಕವನ. ಸನದಿಯವರಂತೂ ಮುಂಬೈ ಬದುಕಿನ ಎಲ್ಲ ಒತ್ತಡ, ಹಿಂಸೆ, ಕಿರಿಕಿರಿಗಳನ್ನು ಅನುಭವಿಸಿದವರು.'ಸಾಗರದಬ್ಬರ ಮೀರಿಸಬಲ್ಲ ಸದ್ದಿನ ನಗರದಲ್ಲಿ ಶಬ್ದಕೆ ಶಬ್ದವೆ ಶತ್ರುವಾಗಿ ಬರಿ ಸದ್ದೇ ಮೆರೆಯುವ ಸರಹದ್ದಿನಲಿ! ಒಬ್ಬರಿಗೊಬ್ಬರು ಅರಿಯಗೊಡದ ತರ ಸದ್ದು '(ಮಹಾನಗರದ ಸದ್ದು–ಪು. ೧೮) ಎಂಬ ಸಾಲುಗಳು ಸದ್ದುಗದ್ದಲಗಳ ಜನಸಾಂದ್ರತೆಯ, ಗೊಂದಲಮಯವಾದ ಯಂತ್ರನಗರಪರಿಸರದಲ್ಲಿ ಬದುಕು ಎಷ್ಟು ಬಿಗಡಾಯಿಸುತ್ತದೆ ಎಂಬ ಸತ್ಯವನ್ನು ಕಟ್ಟಿಕೊಡುತ್ತವೆ. ಇಲ್ಲಿನ ಭಾಷೆ ಮತ್ತು ಭಾವಗಳ ಸಾನುರೂಪತೆ ಗಮನಾರ್ಹ.

'ಹುಚ್ಚರು' ಕವನದಲ್ಲಿ ಸಮಾಜಘಾತುಕ ಶಕ್ತಿಗಳನ್ನು ಅತಿಸೂಕ್ಷ್ಮವಾಗಿ ವಿಡಂಬಿಸುವ ಚುರುಕುತನ ಮೆಚ್ಚುವಂತಿದೆ.ಅಂತಃಸ್ವತ್ವಗಳಿಂದ ಸಮಾಜವನ್ನು ಕಟ್ಟುವ ಮಹಾನ್ ಚೈತನ್ಯಗಳು ಆಷಾಢಭೂತಿಗಳಿಂದ ಅವಮಾನಕ್ಕೊಳಗಾಗುವ ಅಂಶವನ್ನು ನವಿರಾಗಿ ನಿರೂಪಿಸುತ್ತಲೇ ಬೂಟಾಟಿಕೆಯಿಂದ ಮೆರೆಯುತ್ತ ಸಮಾಜವನ್ನು ಟೀಕಿಸುವ, ನಿಂದಿಸುವ ಟೊಳ್ಳು ವ್ಯಕ್ತಿತ್ವವನ್ನೂ ಸನದಿಯವರು ಬಯಲಿಗೆಳೆಯುತ್ತಾರೆ.'ತಮ್ಮಂತರಾಳಕ್ಕೆ ಇಳಿಯಲಾಗದ ಜನಕೆ ಹೇಗೆಲ್ಲ ಸಿದ್ಧಿಸುವುದೋ ಹೆರರನಣಕಿಸಿ ನಗುವ ವಕ್ರಗತಿ ವ್ಯವಹಾರ!'ಎಂಬ ಮಾತಿನಲ್ಲಿ ಕುಟಿಲತೆ ಮತ್ತು ಆಷಾಢಭೂತಿತನಗಳ ಬಗೆಗಿನ ವಿಷಾದವನ್ನೂ ವ್ಯಕ್ತಪಡಿಸುತ್ತಾರೆ.ಕವಿ ಸನದಿಯವರನ್ನು ಅಭಿವಂದಿಸಿದ ಶ್ರೀ.ಪ್ರಭುಶಂಕರರು ಈ ಪದ್ಯದ ಮೊದಲ ಸಾಲುಗಳನ್ನು ಕವಿಗೆ ಕಾಡುತ್ತಿರುವ ಮುಪ್ಪಿನ ಭಯ ಎಂಬರ್ಥದಲ್ಲಿ ವ್ಯಾಖ್ಯಾನಿಸುತ್ತಾರೆ.'ಮೆದುಳು ಮನಗಳ ನಡುವೆ ಹರಿವ ಕಂದರದಾಳ ಹೆಚ್ಚಿಸುವುದೇಕೋ ಸ್ಮರಣಶಕ್ತಿಯ ಕೊರತೆ!'(ಪು.೯೯)ಇದು ಜಾಣ ಮರೆವೂ ಆಗಿರಬಹುದು; ಸಮಾಜವನ್ನು ವಿಡಂಬಿಸುವ ಸಂದರ್ಭದಲ್ಲಿ ಆಡುಮಾತಿನ ಮೂಲಕ ವಿಚಾರವನ್ನು ಹೆಚ್ಚು ಖಾಸಗೀಕರಣಗೊಳಿಸುವ ವಿಧಾನವೂ ಆಗಿರಬಹುದು.ಈ ರಚನಾತಂತ್ರ ಸನದಿಯವರ ಕಾವ್ಯದ ಒಂದು ವಿಶಿಷ್ಟ ಗುಣವೂ ಆಗಿದೆ.

.'ಹಿಂಡಿನೆದುರಿಗೆ' ಎಂಬ ಕವನದಲ್ಲೂ ಇದಕ್ಕೆ ಸಂವಾದಿಯಾದ ಭಾವವೇ ಹರಳುಗಟ್ಟಿದೆ. 'ಹಿಂಡಿನೆದುರಿಗೆ ನಿಂತು ನನ್ನತನವನೆ ಕಳೆದುಕೊಂಡೆನೆ .ಜೀವಹಿಂಡುವ ಹಾಗೆ ಹಿಂಡುಮಾಡುವ ಸದ್ದು-ಗೊಂದಲದಲ್ಲಿ ಸದ್ವಿವೇಕದ ಸಣ್ಣದನಿಯೂ ಹಿಂಡಿನಲಿ ಮುಳುಗಿಹೋಗುವೊಲು..'(ಪು.೨೨) ಮಾನವೀಯತೆಯ ಹುಡುಕಾಟದಲ್ಲಿ ವ್ಯಕ್ತಿತ್ವವೇ ಕಳೆದುಹೋಗುತ್ತದೆನ್ನುವ ಅಂಶ ಈ ಸಾಲುಗಳಲ್ಲಿ ತುಂಬ ರೋಚಕವಾಗಿಯೂ ಮಾರ್ಮಿಕವಾಗಿಯೂ ಹೊಮ್ಮಿಸಿವೆ.

ಸಾಧನೆಯ ಛಲ, ಹೊಸಹೊಸದನ್ನು ಕಾಣುವ ಕಟ್ಟುವ ಕ್ರಿಯಾಶೀಲತೆ, ಆತ್ಮವಿಶ್ವಾಸ, ಮುತ್ಸದ್ಧಿತನ, ಸಾಹಸಪ್ರವೃತ್ತಿಗಳಿದ್ದರೇ ಬದುಕು ಅರ್ಥಪೂರ್ಣ. ಈ ಅಂಶವನ್ನು ಸಮರ್ಥವಾಗಿ ನಿರೂಪಿಸುವ ಕವನ 'ತುಳಿದ ದಾರಿ'. 'ಹೊಸದರಿಯೊಳಗೊಮ್ಮೆ ಬಿದ್ದರೂ ಎದ್ದರು ಸಾಹಸದ ಶ್ರೇಯದಲಿ ಅರಳುವುದು ಪ್ರಾಣ !' (ಪು.೨೩) ಎಂಬ ಮಾತುಗಳಲ್ಲಿ ಬದುಕನ್ನು ಇತ್ಯಾತ್ಮಕವಾಗಿ ದರ್ಶಿಸಬೇಕೆಂಬ ಸಂದೇಶವಿದೆ.

ಸಾಧಕನಾದವನು ನಿಂದೆ, ಅಪವಾದಗಳನ್ನು ಸ್ಥಿತಪ್ರಜ್ಞತೆಯಿಂದ ಸ್ವೀಕರಿಸಬೇಕೆಂಬ ಸಿದ್ಧಾಂತಕ್ಕೆ ಕನ್ನಡಿ ಹಿಡಿಯುವ ಕವನಗಳು 'ಸ್ವರತಿ' ಮತ್ತು 'ಕೊಡುಗೆ'.ಸಾವಿರ ಉಳಿಯ ಪೆಟ್ಟು ಬಿದ್ದಾಗಲೇ ಶಿಲೆ ಶಿಲ್ಪವಾಗುವುದು.'ಎಂಬ ಮಾತಿಗೆ ಸಾಕ್ಷಿಯೆನಿಸುವ ಕವನ 'ಅಪಶ್ರುತಿ.'ಮಣ್ಣು ಮಡಿಕೆಯಾಗಲು ಹುಳಿಯಾಗಿ, ಹದವಾಗಿ ಮೆದುವಾಗಿ ಕುದಿಗೊಂಡು ತಿಗರಿಯ ಚಕ್ರದಲ್ಲಿ ತಿರುಗಬೇಕು.'ಹಸಿಮಣ್ಣಿಗೆ ಹೊಸದಾಕಾರ ಕೊಡುವುದಕೆ ಬೇಕಲ್ಲವೇ ಜೋರಿನಿಂದ ತಿರುಗುವ ತಿಗರಿ?'(ಪು.೨೭) ಕುಲುಮೆಯ ಬೆಂಕಿಯಲ್ಲಿ ಕಾಳಿಕೆಯೆಲ್ಲ ಕರಗಿದಾಗಲೇ ಚಿನ್ನ ಅಪರಂಜಿಯಾಗುವುದು.ಕೆಡುಕಿನಿಂದಲೇ ಒಳಿತಿನ ಮೌಲ್ಯ, ಅಪಶ್ರುತಿಯಿಂದಲೇ ಶ್ರುತಿಯ ಘನತೆ ಅರಿವಾಗುವುದು.

'ಪರಿಸರದ ಸೊಗಸು' ತುಂಬ ಆತ್ಮೀಯವಾದ ಅಷ್ಟೇ ಭಾವಪೂರ್ಣ ಕವನ. ಅಧಿಕಾರ, ಆಸ್ತಿ, ಅಂತಸ್ತುಗಳ ಬೆನ್ನುಹತ್ತಿ ಬದುಕಿನ ಶಾಂತಿ, ಸಂತೋಷಗಳನ್ನು ಕಳೆದುಕೊಳ್ಳುವ ವಿಚಾರ ಇಲ್ಲಿ ಅತ್ಯಂತ ಕಲಾತ್ಮಕವಾಗಿ ಕಥನಕವನದ ರೀತಿಯಲ್ಲಿ ಬಿಚ್ಚಿಕೊಳ್ಳುತ್ತದೆ. ಹಂಗಿನರಮನೆಗಿಂತ ಇಂಗಡದ ಗುಡಿಲೇಸು ಎನ್ನುವಂತೆ ಪದವಿ ಪ್ರತಿಷ್ಠೆಗಳು ಕೊಡದ ಸುಖನೆಮ್ಮದಿಗಳು ಸ್ವಾತಂತ್ರ್ಯದ ಸುಖದಲ್ಲಿದೆ ಎಂಬ ನಿತ್ಯಸತ್ಯವನ್ನು ಕವನ ಹೃದಯಂಗಮವಾಗಿ ನಿರೂಪಿಸುತ್ತದೆ. ಯಾವುದೇ ಸ್ಥಾನಮಾನಗಳು ವ್ಯಕ್ತಿಯ ಸಾಧನೆ ಮತ್ತು ಯೋಗ್ಯತೆಯಿಂದ ಲಭಿಸಬೇಕೇ ವಿನಾ ಧನ, ಕನಕ, ವಸ್ತು, ವಾಹನಗಳ ಪ್ರಭಾವದಿಂದಲ್ಲ ಎಂಬ ಧ್ವನಿಯೂ ಇಲ್ಲಿ ಮುಖ್ಯವಾಗುತ್ತದೆ. 'ಅನಾಯಾಸ ದೊರೆತ ಪದವಿಗೇರಿದ ಮನುಜ ಕಳೆದುಕೊಳ್ಳುತ್ತಾನೆ ತನ್ನ ಮನದ ಶಾಂತಿ'(ಪು. ೩೦) ಎಂಬ ಮಾತುಗಳಲ್ಲಿ ವ್ಯಕ್ತವಾಗುವ ಖಚಿತ ನಿಲುವು, ತಾತ್ವಿಕ ಚಿಂತನೆ ಪರಿಭಾವನಾಯೋಗ್ಯ.

'ಆರಡಿಯ ವಿಶ್ವ' ಕವನ ಶ್ರೀಮಂತಿಕೆ ಮತ್ತು ಬಡತನಗಳ ಅಂತರ ಮತ್ತು ಶೋಷಣೆಯ ಕರಾಳಮುಖಗಳು ಅನಾವರಣಗೊಳ್ಳುತ್ತವೆ. ಬಡಕೂಲಿಗಳ ಬೆವರು, ಶ್ರಮಗಳಿಂದ ಮಹಲುಕಟ್ಟಿ ಮೆರೆಯುವ ಶ್ರೀಮಂತರನ್ನೂ ಅವರ ಅಸ್ತಿತ್ವಕ್ಕೆ ಅಸ್ತಿವಾರವಾಗಿ ತಮ್ಮ ಅಸ್ಮಿತೆಗಳನ್ನು ಕಳಕೊಳ್ಳುವ ಬಡಜನರ ನೋವು, ಸಂಕಟಗಳನ್ನೂ ಈ ಕವನ ದರ್ಶಿಸುತ್ತದೆ. ಬಡತನದ ಬವಣೆಯಲ್ಲಿ, ಮುರುಟಿಹೋಗುವ ಜೀವನಾಸಕ್ತಿ, ಬದುಕಿನ ಕನಿಷ್ಠ ಆಸೆ ಆಕಾಂಕ್ಷೆಗಳನ್ನೂ ಈಡೇರಿಸಲಾಗದ ಅಸಹಾಯಕತೆ, ನಗರಜೀವನದ ಉಸಿರಾಡಲೂ ಕಷ್ಟವಾಗುವ ಸೀಮಿತ ಸ್ಥಳದಲ್ಲಿ ಇಡೀ ಕುಟುಂಬಜೀವನದ ಸಮಸ್ತ ಆಗುಹೋಗುಗಳನ್ನು ನಿಭಾಯಿಸಬೇಕಾದ ಅನಿವಾರ್ಯತೆ ಇಲ್ಲಿ ಮನಮುಟ್ಟುವಂತೆ ನಿರೂಪಿತವಾಗಿವೆ. 'ಇವರದೇನೆಲ್ಲ ನಡೆಯುವುದು ಬರಿ ಆರಡಿಯ ವಿಶ್ವದಲಿ'(ಪು.೩೩) ಕವನದ ಕೊನೆಯ ಸಾಲಿನಲ್ಲಿ ವ್ಯಕ್ತವಾಗುವ ಮಾನವೀಯ ಕಾಳಜಿ ಕವಿಯ ಜೀವನಾದರ್ಶಕ್ಕೆ ಕೈಗನ್ನಡಿ.

ಆರಡಿ ಕವನದ ಕವಿಯ ಚಿಂತನೆ, ವಿಚಿಕಿತ್ಸಕ ಮನೋಭಾವ 'ಯಕ್ಷಪ್ರಶ್ನೆ'ಯಲ್ಲಿ ಮುಂದುವರಿದಿದೆ. ಬದುಕಿನಲ್ಲಿ ಅಮಾಯಕ ಮುಗ್ಧಜೀವಿಗಳು ಕಾಮುಕರ ಕ್ರೌರ್ಯಕ್ಕೆ ತಮ್ಮ ಮಾನ,ಪ್ರಾಣಗಳನ್ನು ಬಲಿ ತೆರಬೇಕಾದ, 'ಪುರುಷ ಶಕ್ತಿಯ ಗಾಣಕ್ಕೆ ಕಬ್ಬಾಗ'ಬೇಕಾದ(ಪು.೩೫) ಅಮಾನವೀಯ ದಾರುಣ ಪ್ರಸಂಗಗಳಿಗೂ ಮುಂಬೈಯಂಥ ಮಹಾನಗರವೊಂದು ಹೇಗೆ ಸಾಕ್ಷೀಭೂತವಾಗುತ್ತದೆಂಬುದನ್ನು ಚಿತ್ರಿಸಿದ ರೀತಿ ಅತ್ಯಂತ ಪರಿಣಾಮಕಾರಿಯಾಗಿದೆ. 'ಸಹಜಜೀವನಕ್ರಮಕೆ ಹೊರತಾದ ವಿಕೃತಿಗೆ ಯಾ ಜಾತಿ ಯಾವ ಕುಲ ಯಾ ದೇಶ ಯಾವ ನೆಲ ನ್ಯಾಯವಾದಿಗಳಾರು ಹೇಳಬಹುದೇ?'ಈ ಪ್ರಶ್ನೆ ಸಾಮಾಜಿಕ ಕಾಳಜಿಯುಳ್ಳ ಎಲ್ಲರ ಮಾನವೀಯ ಸ್ಪಂದನೆಯಾಗಿ ಮನಸ್ಸನ್ನು ಕಲಕುತ್ತದೆ; ಆತ್ಮವನ್ನು ಒರೆಹಚ್ಚುತ್ತದೆ.

'ಇಳಿಗಾಲದ ಒಂದು ಸಂಜೆ'(ಪು.೩೭-೩೮)ಯಲ್ಲಿ ವೃದ್ಧಾಪ್ಯದಲ್ಲಿ ಗತ ಬದುಕಿನ ಸಿಹಿಕಹಿ ನೆನಪುಗಳನ್ನು ಮೆಲುಕು ಹಾಕುತ್ತಲೇ ಬದಲಾದ ಬದುಕಿನ ಜೀವನಮೌಲ್ಯವನ್ನು ಕುರಿತು ವಿಷಾದಿಸುವ ಒಂದು ಆರ್ದ್ರ ಮನಸ್ಸನ್ನು ಕಾಣಬಹುದು. ಮುಪ್ಪಿನಲಿ ನೆನಪೇ ಊರುಗೋಲಾಗುತ್ತಿರುವ ಪರಿಸ್ಥಿತಿಯಲ್ಲಿ ಬದಲಾದ ಪರಿಸರದೊಂದಿಗೆ ರಾಜಿಮಾಡಿಕೊಳ್ಳಬೇಕಾದ ಅನಿವಾರ್ಯತೆಯನ್ನು ವಿಷಣ್ಣತೆಯಿಂದ ಧ್ವನಿಸುತ್ತದೆ ಈ ಕವನ. 'ದುಬೈಯಲ್ಲೊಂದು ಸಂಜೆ'(ಪು.೬೧-೬೨) ಒಂದು ಸುಂದರ ಶಬ್ದಚಿತ್ರ. ಮುಸ್ಸಂಜೆಯ ಹೊತ್ತಿನಲ್ಲಿ ದುಬೈಯ ನುಣ್ಣನೆಯ ಮರಳರಾಶಿಯ ಮೇಲೆ ಅಂಗಾತ ಮಲಗಿ ನೋಡಿದರೆ ಕಣ್ಣು ಹಾಯುವವರೆಗೂ ಪ್ರಕೃತಿಯ ಸುಂದರ ದೃಶ್ಯಪರಂಪರೆಗಳು ಪರದೆಯ ಮೇಲಿನ ಚಿತ್ರಗಳಂತೆ ಸರಿಯುತ್ತವೆ; ಕಣ್ಮನಗಳನ್ನು ಸೆಳೆಯುತ್ತವೆ. 'ಅಲ್ಲಿ

ಮೇಯುತ್ತಿರುವ ಬೆಳ್ಳಬೆಳ್ಳನೆಯ ಮೊಲಗಳು, ಕುಂಟುತ್ತ ಕೂರುತ್ತ ಒಂದರೊಂದರ ಮೇಲೆ ಏರುತ್ತ ಹಾರುತ್ತ ಜಿಗಿಯುತ್ತ ನೆಗೆಯುತ್ತ ಊರಿಂದೂರಿಗೆ ಗುಳೇ ಹೊರಟಿರುವ ಏಸೊಂದು ಕುರಿಗಳು!..'(ಪು.೬೧-೬೨) ಹೀಗೆ ಕವನದ ಪ್ರತಿ ಸಾಲುಗಳೂ ಸುಂದರ ದೃಶ್ಯಾವಳಿಗಳನ್ನು ಕಣ್ಣಮುಂದೆ ಕುಣಿಸುತ್ತವೆ.

'ಇನ್ನೆಷ್ಟು ಬಾಕಿ'(ಪು.೩೯-೪೦) ಮತ್ತು 'ಮುಪ್ಪು ಮುಪ್ಪೆಂದು'(೪೧-೪೨) ಎರಡು ಸುಂದರ, ಸಾರ್ಥಕ ಕವನಗಳು. ಬಾಳಿನ ಸಂಜೆಗತ್ತಲಲ್ಲಿ ಜೀವಭಾವಗಳನ್ನು ತಲ್ಲಣಿಸುವ ಸಾವು, ಮುಪ್ಪಿನ ಭಯವನ್ನು ಕಟ್ಟಿಕೊಡುತ್ತಲೇ ಉಸಿರು ನಿಲ್ಲವ ತನಕ ಮನುಷ್ಯ ಕ್ರಿಯಾಶೀಲನಾಗಿರಬೇಕು, ನಿರಾಶೆ, ನೋವುಗಳಿಂದು ಜೀವನಾಸಕ್ತಿಯನ್ನು ಕಳೆದುಕೊಂಡರೆ ಬದುಕು ಶೂನ್ಯವಾದೀತು ಎಂಬ ಎಚ್ಚರಿಕೆಯ ಮೂಲಕ ಬಾಳಿನ ಸೂತ್ರಗಳನ್ನು ಧ್ವನಿಸಿದ ರೀತಿ ಹೃದಯಸ್ಪರ್ಶಿಯಾಗಿದೆ. 'ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೆ ಜೀವನ' ಎಂಬ ಜಿ.ಎಸ್.ಶಿ.ಯವರ ಕವಿವಾಣಿ ಮನುಷ್ಯಸ್ವಭಾವ ಮತ್ತು ಬದುಕಿನ ವಾಸ್ತವತೆಯನ್ನು ಬಿಂಬಿಸಿದರೆ ಅದಕ್ಕೆ ಉತ್ತರವೆಂಬಂತೆ ಕಳೆದುಹೋದುದಕ್ಕೆ ಚಿಂತಿಸದೆ ಇರುವುದರಲ್ಲಿ ತೃಪ್ತಿಹೊಂದುವುದು ಮುಖ್ಯವೆಂಬ ಸನದಿಯವರ ಆತ್ಮಗತ ಉಪದೇಶ ಜೀವನಸಂದೇಶವಾಗಿ ಗಮನ ಸೆಳೆಯುತ್ತದೆ. ಸಾವು ಅನಿವಾರ್ಯವಾಗಿದ್ದರೂ ಅದು ಅಜ್ಞಾತ ಸತ್ಯ.ಬದುಕು ಜ್ಞಾತಸತ್ಯ.ಅಜ್ಞಾತಸಾವಿನ ಭಯ, ದುಃಖಕ್ಕಿಂತ ಜ್ಞಾತ ಬದುಕಿನ ಸುಖ, ಸಂತೋಷ ಮುಖ್ಯ.ಸುಖಸಂತೋಷಗಳೆಂಬುದು ನಮ್ಮನ್ನು ಅರಸುವುದಲ್ಲ, ನಾವು ಅರಸಬೇಕು.ಏಕೆಂದರೆ ಅವು ಹೊರಗಿನಿಂದ ಕೊಳ್ಳುವ ವಸ್ತುಗಳಲ್ಲ. ಒಳಗಿನಿಂದ ಅನುಭವಗೊಳ್ಳುವ ಭಾವ. ಅದನ್ನು ಕಂಡುಕೊಳ್ಳುವ ಶಕ್ತಿ ನಮ್ಮೊಳಗೇ ಇದೆ.'ನಾನು ಮನೆಯಲ್ಲೇ ಕೂತರೆ ಎಲ್ಲಿ ಲೋಕದ ಸ್ಪರ್ಶ ಎಲ್ಲಿ ಮಾತಿನ ಹರ್ಷ ಎಲ್ಲಿ ರಸಸಂವಾದ ಎಲ್ಲಿ ನಡೆನುಡಿ ಸಂಘರ್ಷ? ಒಳಹೊರಗೂ ಬದುಕೆಲ್ಲ ಸಪ್ಪೆ ಸಪ್ಪೆ ಕಡಲತಡಿಯಲ್ಲಿ ತೆಪ್ಪಗೇ ಬಿದ್ದಂತೆ ಬರಿಯ ಚಿಪ್ಪೆ' ಎಂಬ ಮಾತುಗಳು ಅತ್ಯಂತ ಮಾರ್ಮಿಕವಾಗಿವೆ. ಜೀವನದ ಮಿತಿಯಲ್ಲಿ ಬೇಸತ್ತು ಬದುಕಿಗೆ ವಿದಾಯ ಹೇಳದೆ ಅಥವಾ ನಿರಾಶಾವಾದಿಯಾಗದೆ ಇರುವುದನ್ನೇ ಚೆನ್ನಾಗಿ ಅನುಭವಿಸಬೇಕೆನ್ನುವ ವಿಚಾರ ಸನದಿಯವರ ಅನೇಕ ಕವಿತೆಗಳ ಮುಖ್ಯ ಆಶಯವೇ ಆಗಿದೆ. ಇಂಥ ಕವನಗಳಲ್ಲಿ ಮಾನವಸಹಜ ದೋಷ,ದೌರ್ಬಲ್ಯಗಳನ್ನು ಅತ್ಯಂತ ಸಹೃದಯತೆಯಿಂದ ಖಂಡಿಸಿ, ಉತ್ತಮಿಕೆಯನ್ನು ಮಂಡಿಸಿ ಓದುಗರ ಭಾವಕೋಶಗಳನ್ನು ತುಂಬುವಂತೆ, ಲೋಕದ ಒಗೆಗಿನ ದೃಷ್ಟಿ ಹೆಚ್ಚು ಚುರುಕಾಗುವಂತೆ, ಅನುಭವದ ವ್ಯಾಪ್ತಿ ವಿಶಾಲವಾಗುವಂತೆ ಚಿತ್ರಿಸಿಕೊಂಡು ಹೋಗುತ್ತಾರೆ.

೨೦೦೪ ರಲ್ಲಿ ಭಾರತವನ್ನು ತತ್ತರಿಸಿದ ಸುನಾಮಿಯ ಅಟ್ಟಹಾಸವನ್ನು ಕುರಿತ ಚಿತ್ರಣ 'ಜಲದುರ್ಗಾವತಾರಿ', 'ಪ್ರಕೃತಿ ಪರಿಸರವೆಲ್ಲ ನಿನ್ನಿಂದ ಬುಡಮೇಲು ಕತ್ತರಿಸಿ ಬಿಟ್ಟಂತೆ ಬುವಿಯ ಕರುಳು! (ಪು.೫೭) ಎಂಬ ವರ್ಣನೆ ಸುನಾಮಿಯ ದುರಂತವನ್ನು ಕಣ್ಣಿಗೆ ರಾಚುವಂತಿದೆ. 'ಅರಬ ಸೀಮೆಯ ಹಾಡು'(ಪು.೫೯–೬೦) ಹೊಟ್ಟೆಪಾಡಿಗಾಗಿ ತಾಯ್ನಾಡು, ಸಂಬಂಧಗಳನ್ನು ತೊರೆದುಬಂದು ಅರಬದೇಶದ ಅಜ್ಞಾತಲೋಕದಲ್ಲಿ ಜೀವವನ್ನು ಒತ್ತೆಯಿಟ್ಟು ದುಡಿಯುವ ಶ್ರಮಜೀವಿಗಳ ಜೀವನವನ್ನು ಅತ್ಯಂತ ಜ್ವಲಂತವಾಗಿ ಕನ್ನಡಿಸುತ್ತದೆ. ಧನಕನಕಗಳ ಆಮಿಷಕ್ಕೆ ಒಳಗಾಗಿ ತೇಯುವ ಬದುಕಿನಲ್ಲಿ ಸುಖಸಂತೋಷಗಳು ಮರೀಚಿಕೆಯಾಗುವ ಬಹುಸಂಖ್ಯಾತ ಬಡಜನತೆಯ ಬಗ್ಗೆ ಸ್ಪಂದಿಸಿದ ಕವಿ ಮನಸಿನ ವಿಷಾದ ಅರಬಸೀಮೆಯ ಹಾಡಿನಲ್ಲಿ ಹೃದಯಸ್ಪರ್ಶಿಯಾಗಿ ಹೊಮ್ಮಿದೆ. ಕವನದ 'ಹೊರಬದುಕಿನೊಳತಿರುಳು ತಿಳಿಯುತ್ತ ಹೋದಾಗ ಆ ತಿಳಿವೆ ಬರಬರುತ ಮನಸಿಗಾಯಿತು ಭಾರ! (ಪು.೫೯)......ಯಾರ ಬೆವರಿನ ಮೇಲೆ ಯಾರದೋ ಅಟ್ಟಣಿಗೆ ಯಾರ ಹಿಡಿಶಾಪವೋ ಯಾರ ಒಡಲುರಿಗೆ' ಹೊಟ್ಟೆ ತುಂಬಿದ್ದರೂ ಹೃದಯದುಪವಾಸಿಗಳು! (ಪು.೬೦)ಇತ್ಯಾದಿ ಸಾಲುಗಳಲ್ಲಿ ವ್ಯಕ್ತವಾಗುವ ವಿಷಾದ, ಸಹತಾಪ ಪರಿಭಾವನಾಯೋಗ್ಯ.

'ಅಮೇರಿಕೆಯಲ್ಲಿ ಕಂಡ ಕನಸು'(ಪು.೬೩–೬೫) ಒಂದು ಕಥನ ಕವನದ ಮಾದರಿಯಲ್ಲಿದ್ದು ಕವಿಯ ವಿಶ್ವಭ್ರಾತೃತ್ವದ ಪರಿಕಲ್ಪನೆಯನ್ನು ಪರಿಚಯಿಸುತ್ತದೆ. ಎರಡು ಪ್ರಬಲ ಶಕ್ತಿಗಳು ಮುಖಾಮುಖಿಯಾಗಿ ಸಮಾಜನಿರ್ಮಾಣದ ಬದಲಿಗೆ ಸಮಾಜಘಾತುಕವಾಗುವ ವಿಚಾರ ಮಾರ್ಮಿಕವಾಗಿದೆ. ವಿಕಾಸ ಮತ್ತು ವಿನಾಶಗಳು ಪೈಪೋಟಿಗಿಳಿದು ಮಾನವತ್ವವನ್ನು ನಾಶಮಾಡುವ ನೋವು, ಅದಕ್ಕೆ ಕವಿಹೃದಯ ಸಾಕ್ಷಿಯಾಗುವ ಸಂಕಟವನ್ನು ವ್ಯಕ್ತಪಡಿಸುತ್ತಲೇ ಅದು ಕನಸು ಎಂಬ ಸತ್ಯ ದೃಗ್ಗೋಚರವಾಗುತ್ತದೆ.ಗದ್ಯಪದ್ಯಗಳ ಮಧುರಮೈತ್ರಿಯಲ್ಲಿ ನಿರೂಪಿತವಾದ ಕವನ ಮನಸ್ಸನ್ನು ಬಹುಕಾಲ ಹಿಡಿದು ನಿಲ್ಲಿಸುತ್ತದೆ.'ಒಂದು ಕೈಯಲಿ ವಿಕಾಸದ ಯಂತ್ರ ಒಂದು ಬಾಯಲ್ಲಿರುವ ವಿನಾಶದ ಮಂತ್ರಗಳ ಪೈಪೋಟಿಯ ನಡುವೆ ವಿಶ್ವಮಾನವನ ಹೃದಯಕ್ಕೆ ಪರಮಘೋಷಣೆಯೀವ ಮನುಜಮತ, ವಿಶ್ವಪಥ' ದ ಪರಿಕಲ್ಪನೆಯು ನೆಲೆಗೊಳ್ಳುವುದು ಹೇಗೆ?'(ಪು.೬೫)ಈ ಪ್ರಶ್ನೆ ಎಲ್ಲ ಸಹೃದಯರನ್ನೂ ಕಾಡುವ ಪ್ರಶ್ನೆಯಾಗಿ ಮನಸ್ಸಿನಲ್ಲಿ ಅನುರಣನಗೊಳ್ಳುತ್ತದೆ.ಇಡೀ ಜಗತ್ತನ್ನು ಸೂಜಿಗಲ್ಲಿನಂತೆ ಆಕರ್ಷಿಸುವ, ತನ್ನ ವೈಭವದ ಬದುಕು ಭಾಗ್ಯಗಳಿಂದ ಜಗತ್ತಿಗೇ ದೊಡ್ಡಣ್ಣನೆನಿಸಿದ ಅಮೇರಿಕೆಯ ಭವ್ಯ ಸೌಂದರ್ಯವನ್ನು 'ಕೆನಡಾ ದೇಶದ ಮುಗು' ಸೊಗಸಾಗಿ ಪರಿಚಯಿಸುತ್ತದೆ.'ಅಮೆರಿಕೆಯ ಬರಿಮೈಗಳು' ಕವನದಲ್ಲಿ ಅಮೇರಿಕೆಯ ಸಂಸ್ಕೃತಿ

ಮತ್ತು ಜನಜೀವನವನ್ನು ವಿವರಿಸಿದ ರೀತಿ ಕುತೂಹಲಕಾರಿಯಾಗಿದೆ, ರೋಚಕವಾಗಿದೆ.

'ಬದುಕುವುದೆಂದರೆ..'(ಪು.೭೨-೭೩)ವರ್ತಮಾನ ಕಾಲದ ಕೊಳ್ಳುಬಾಕ ಸಂಸ್ಕೃತಿ, ಆಷಾಢಭೂತಿತನ, ಮೋಸ, ವಂಚನೆ, ಭ್ರಷ್ಟಾಚಾರಗಳ ಮೌಲ್ಯರಹಿತ ಬದುಕಿಗೆ ನಿದರ್ಶನ. ಇತ್ಯಾತ್ಮಕಗುಣಗಳೆಲ್ಲವನ್ನೂ ಗಾಳಿಗೆ ತೂರಿ ಸ್ವಾರ್ಥಸಾಧನೆಯೇ ಬದುಕಿನ ಸರ್ವಸ್ವವೆಂದು ಭಾವಿಸುವುದು, ಸುಳ್ಳಿನ ಉಸುಕುನೆಲದಲ್ಲಿ ಭ್ರಾಮಕಮಹಲಿನ ನಿರ್ಮಾಣ ಮಾಡಿ ಊಸರವಳ್ಳಿಯಾಗುವುದು, ಬದುಕಿನ ಪ್ರತಿಯೊಂದು ಮೌಲ್ಯವನ್ನೂ ಕರಗಿಸಿ ಒಂದೇ ಧನದಾಹಕ್ಕೆ ಮಣೆಹಾಕುವುದು, ಅಧರ್ಮ ಅನ್ಯಾಯಗಳಿಗೆ ಅನ್ಯರನ್ನು ಹೊಣೆಮಾಡುವುದು-ಇತ್ಯಾದಿ ಸಮಾಜವಿಧ್ವಂಸಕ ಅಂಶವನ್ನು ನಿರೂಪಿಸುತ್ತಲೇ ಮೌಲ್ಯಾಧಾರಿತ ಬದುಕಿನ ಅಗತ್ಯವನ್ನು ಒತ್ತಿಹೇಳುತ್ತದೆ ಈ ಕವನ. 'ಧರ್ಮ-ದೇವರ ನೆರಳಲ್ಲಿ ನಿಂತು ನೆರೆಹೊರೆಯ ಮನೆಮಾರುಗಳ ಸುಡುವುದು ಅರರೆ! ನಾವು ಇಂಥವರಲ್ಲ'(ಪು.೭೨) ಎನ್ನುವವರೇ 'ತಿಳಿಗೊಳಕೆ ಕಲ್ಲೆಸೆದು ತಳದ ಕೊಳೆ ಮೇಲೆಬ್ಬಿಸುವುದು .ಯಾರು ಮಾಡಿದ್ದು ಹೀಗೆಂದು ಸತ್ಯಶೋಧನೆಗಾಗಿ ಆಯೋಗ ನೇಮಿಸುವುದು: ಇದು ಇಂದಿನ ಲೋಕದ ವ್ಯವಹಾರ!'(ಪು.೭೩)ಎನ್ನುವ ಮಾತುಗಳಲ್ಲಿ ಹುದುಗಿದ ನೋವು, ಕಾಳಜಿ ಮನನೀಯ.ಓದುಗರನ್ನು ಆತ್ಮವಿಮರ್ಶೆಗೆ ಹಚ್ಚುವ ಪರಿ ಅಚ್ಚರಿ ಮೂಡಿಸುತ್ತದೆ.

'ವರದಾನ'(ಪು. ೭೪-೭೫) ಕವಿತೆಯಲ್ಲಿ ಆಧುನಿಕೋತ್ತರ ತಂತ್ರಜ್ಞಾನದ ಆವಿಷ್ಕಾರಕ್ಕೆ ಸಂಬಂಧಿಸಿದ ಯಾಂತ್ರಿಕ ಪುರೋಭಿಗಮನವನ್ನು, ಜ್ಞಾನಶಾಖೆಗಳ ವೈವಿಧ್ಯ, ಹೊಸತನಗಳನ್ನು ಅಚ್ಚರಿಯಿಂದ ನೋಡುವ ಕಣ್ಣುಗಳಿವೆ; ಯುವಪೀಳಿಗೆಯ ಸಾಧನೆ, ಸಿದ್ಧಿಗಳನ್ನು ಮೆಚ್ಚುವ ಒಪ್ಪುವ ಮನಸ್ಸಿದೆ. ತಲೆಮಾರುಗಳ ಅಂತರದ ಅರಿವು, ನಂಬಿಕೆಗಳನ್ನು ಸಹಾನುಭೂತಿಯಿಂದ ಪರಿಶೀಲಿಸುವ ಒಂದು ಉದಾತ್ತ ಹೃದಯವಿದೆ. ಹಳೆಯದನ್ನು ತಿರಸ್ಕರಿಸದೆ ಹೊಸದನ್ನು ಸ್ವಾಗತಿಸುವ, ತಿಳಿದುಕೊಳ್ಳುವ ಉತ್ಸಾಹದ, ಆರೋಗ್ಯಪೂರ್ಣ ಮನಸ್ಸು ಇಲ್ಲಿ ಸೊಗಸಾಗಿ ಮೂಡಿದೆ. 'ವಿಜ್ಞಾನ-ತಂತ್ರದಲಿ ನಾನು ಅಜ್ಞಾನಿ ನಿಜ ಚಲಿಸುತಿಹ ಚಕ್ರಕ್ಕೆ ಬ್ರೇಕ್ ಹಾಕಲಾರೆ!ತನ್ನ ಪಾಡಿಗೆ ತಾನೆ ಜಗವೆ ಧಾವಿಸುತಿರಲು ನೂರುಗಾವುದ ಹಿಂದೆ ನಾ ಬೀಳಲಾರೆ! ಬುವಿಯ ಮೊಟ್ಟೆಗೆ ಕಾವು ಕೊಟ್ಟ ಆಗಸಕಿರಲು ದಿನ ದಿನವು ಹೊಸಹುಟ್ಟು ನೋಡುವಾಸೆ.' (ಪು.೭೪) ಇದು ಕವಿಯ ಆಸೆಯೂ ಹೌದು. ನೂತನ ಆವಿಷ್ಕಾರಗಳನ್ನು ಎಲ್ಲ ಮಜಲುಗಳಲ್ಲೂ ಅನುಭವಿಸಬೇಕೆನ್ನುವ ಮುಕ್ತಚಿಂತನೆ ಇಲ್ಲಿ ಉತ್ಕಟವಾಗಿ ಹೊಮ್ಮಿದೆ.ಮತ್ತು ಇದು ಕವಿಯ ವಿಶ್ವಮುಖೀಧೋರಣೆಯನ್ನು ಪ್ರತಿಫಲಿಸುತ್ತದೆ. .

'ಅರಿದೊಡೆ ಶರಣ'(ಪು.೭೬) ಗಾತ್ರದಲ್ಲಿ ಕಿರಿದಾದರೂ ಮೌಲ್ಯದಲ್ಲಿ ಹಿರಿದಾದ

ಕವನ. ಬದುಕಿನಲ್ಲಿ ನೀನು ಏನಾದರೂ ಆಗು, ಆದರೆ ಮೊದಲು ಮಾನವನಾಗು ಎಂಬ ಜೀವನಸೂತ್ರ 'ಅರಿವಿನ ಏಣಿಯನೇರುವ ಮೊದಲು ಪಡೆಯಲೆಬೇಕು ಮಾನವನೆಂಬುವ ಸನದು'(ಪು.೭೬) ಸನದಿಯವರ ಹಿಡಿಯೊಳಗಿನ ಮಾತುಗಳಲ್ಲಿ ಸಶಕ್ತವಾಗಿ ಹೊಮ್ಮಿದೆ. ಸಹೃದಯರನ್ನು ಸಮಾಜಮುಖಿಯಾಗಿಸುವ ಹೆಚ್ಚು ಹೆಚ್ಚು ಸ್ಪಂದನಶೀಲರನ್ನಾಗಿಸಬಲ್ಲ ಮಾನವೀಯತೆಯನ್ನು ಉಳಿಸಿ ಬೆಳಸುವಂತೆ ಮಾಡಬಲ್ಲ ಮಾಂತ್ರಿಕಶಕ್ತಿ ಅವರ ಲೇಖನಿಯಲ್ಲಿ ಹುದುಗಿದೆ.

ಮಾತು ಅಥವ ಶಬ್ದಗಳನ್ನು ಬೆಳಕಿನ ಹೂವಾಗಿ ಕಲ್ಪಿಸುವ ರೂಪಕ ತುಂಬ ಚೇತೋಹಾರಿಯಾಗಿ 'ಬೆಳಕಿನ ಹೂವು(ಪು.೭೭)'ಕವನದಲ್ಲಿ ಮೂಡಿದೆ. ಅನೇಕ ಕವಿಗಳು ಶಬ್ದವನ್ನು ಬ್ರಹ್ಮಕ್ಕೆ, ಕಮಲಕ್ಕೆ, ದ್ರವ್ಯಕ್ಕೆ, ಬೆಳಕಿಗೆ ಹೋಲಿಸಿದ್ದಾರೆ. ಶಬ್ದಮಣಿದರ್ಪಣವನ್ನು ಬರೆದ ಕೇಶಿರಾಜ 'ನಾಭಿಮೂಲದೊಳ್ ಕಹಳೆಯ ಪಾಂಗಿನವೋಲ್ ಶಬ್ದದ್ರವ್ಯಂ ಜನಿಯಿಸುಗುಂ ಶ್ವೇತಂ ಅದರ ಕಾರ್ಯಂ ಶಬ್ದಂ' ಎಂದಿದ್ದಾನೆ. ಸನದಿಯವರು ಇಲ್ಲಿ ಶಬ್ದವನ್ನು 'ನೀರವ ನಿರಾಳ ಮನೋರಂಗದಲಿ ತುಂಬಿದ ಕತ್ತಲೆಯೊಡಲಿಂದ ಬೆಳಕಾಗಿ ಆ ಬೆಳಕೇ ಶಬ್ದವಾಗಿ ಭಾವದ ಕರುಳಬಳ್ಳಿಯಿಂದ ಬಿಡುಗಡೆಯಾಗಿ ಜೀವದೀಕ್ಷೆಯ ಪಡೆದು ಶಬ್ದಾಕೃತಿ ಬಿರಿಯುತ್ತದೆ'(ಪು.೭೭) ಎಂದು ವ್ಯಾಖ್ಯಾನಿಸಿರುವುದರಲ್ಲಿ ಜೀವಸೃಷ್ಟಿಯ ಧ್ವನಿಯಿದೆ. ಕಾವ್ಯವಾಗಲೀ ಕವನವಾಗಲೀ ಕವಿಸೃಷ್ಟಿಯ ಪ್ರತೀಕ.ಪ್ರತಿಭೆಯ ಹೊಳಹಿನಿಂದ ಚಿಮ್ಮುವ ಭಾವಲಹರಿಗಳು ಹೇಗೆ ವಿಕಾಸಗೊಂಡು ಒಂದು ಇಡಿಯ ಕಲಾಕೃತಿಯಾಗಿ ಅರಳಿ ಜನ್ಮತಾಳುತ್ತದೆನ್ನುವುದು ಗಮನಾರ್ಹವಾಗುತ್ತದೆ.ಭಾಷೆ, ಭಾವಗಳ ಅನನ್ಯ ಹೊಂದಾಣಿಕೆಯೂ ಆಕರ್ಷಕವಾಗಿದೆ.

'ಹೊಸಶಬ್ದ ಸಂಸಾರ' ಅಪೂರ್ವ ಕಾವ್ಯ ಕಲ್ಪನೆ. ಇದು ಕವನ ಸಂಕಲನದ ಶೀರ್ಷಿಕೆಯೂ ಹೌದು.ಮೂರುದಶಕಗಳ ಮುಂಬೈಜೀವನದಿಂದ ಸಾಕಷ್ಟು ಬೆಳೆದು ಪಕ್ವವಾಗಿ ತಾಯ್ನಾಡಿಗೆ ಮರಳಿದ ಕವಿ ಹೃದಯದ ದಟ್ಟ ಜೀವನಾನುಭವಗಳ ಕಾಣ್ಕೆ ಇದು.ಇಲ್ಲಿ ಉಸಿರುಗಟ್ಟಿಸುವ ವಾತಾವರಣದಿಂದ ಬಿಡುಗಡೆಗೊಂಡು ಜೀವ ಹಗುರಾದ ಸುಖವಿದೆ.ಜೀವಭಾವಗಳು ದುಡಿದು ಹಣ್ಣಾದ, ಫಲವತ್ತಾದ ಸಾರ್ಥಕತೆಯಿದೆ. ಸಾಧಕನ ಅಂತಶ್ಶಕ್ತಿಯ, ಮನೋಬಲದ, ಜೀವನೋತ್ಸಾಹದ ನಿರಂತರ ಕ್ರಿಯಾಶೀಲತೆಯಿದೆ.ಕಾವ್ಯವೂ ಕಾಲಕಾಲಕ್ಕೆ ಹೊಸಜೀವ ಹೊಸಭಾವಗಳಿಂದ ನವನವೋನ್ಮೇಷಶಾಲಿನಿಯಾಗುವ ಪ್ರಕೃತಿಯಂತೆ ಎಂಬುದನ್ನು ಸನದಿಯವರ ಹೊಸಶಬ್ದದ ಸಂಸಾರ ಕಟ್ಟಿಕೊಡುತ್ತದೆ.ಪದಗಳ ಅನ್ಯೋನ್ಯತೆ ಮೆಚ್ಚುವಂತಿದೆ. ಸ್ವಾನುಭವಗಳನ್ನೇ ಪ್ರತಿಭೆಯ ಮೂಸೆಯಲ್ಲಿ ಕಾವುಗೊಳಿಸಿ ಕರಗಿಸಿ ಅಪ್ಪಟ ಕಲಾಕೃತಿಯಾಗಿಸಿದ ವಿಧಾನ ಆಕರ್ಷಕ.ಮೂರುದಶಕಗಳ ಸಿಹಿಕಹಿ ನೆನಪುಗಳು

ಹರಳುಗೊಂಡು ಚಿತ್ತರಗೊಂಡ ಪರಿ ಅನ್ಯಾದೃಶ್ಯ. ಈ ಕವನದಲ್ಲಿ ಬಳಕೆಯಾದ 'ಜನಾರಣ್ಯ', 'ಜೇನುಗೂಡು ಕೆನೆಗೊಂಡ ಮೌನ', 'ಮುಂಜುಗನ್ನಡಿ', 'ಹುಣ್ಣಿಗೊಸರುವ ಕೀವು' ಮತ್ತೆಮತ್ತೆ ಮನದಾಳದಲ್ಲಿ ಕಾವುಗೊಡುತ್ತಲೇ ಇರುತ್ತವೆ. 'ಕಳೆದ ದಿನಗಳ ಕನಸು ಕರಗಿ ನೀರಾಗದೆಯೆ ಹೆಪ್ಪುಗಟ್ಟಿತು ಮತ್ತೆ ಹೊಸಬದುಕಿನ ಹಂಬಲ'(ಪು.೮೦) ಹಳ್ಳಿಜೀವನದ ಸ್ವಸ್ಥ, ಪ್ರಶಾಂತ, ಪರಿಸರಕ್ಕೆ ಮರಳಿದಾಗಲೂ ನಗರಜೀವನದ ನೆನಪನ್ನು ಹಸಿರಾಗಿಸುವ ವಿಧಾನ. 'ಬನವಾಸಿ ದೇಶಕ್ಕೆ ಹೊರಗಿನಾವೇಶಕ್ಕೆ, ಹೊಟ್ಟೆಬಟ್ಟೆಯ ಜತೆಗೆ ಮನದ ಬಟ್ಟೆಗೆ ದುಡಿದು'(ಪು.೮೦) ಈ ಸಾಲುಗಳಲ್ಲಿ ಪ್ರಾಸದ ಸೊಗಸಿನೊಂದಿಗೆ ಅಂತರಂಗ ಬಹಿರಂಗಗಳನ್ನು ಸಮರಸಗೊಳಿಸಿದ ರೀತಿ ಅದ್ಭುತ. ಲೌಕಿಕ ವ್ಯವಹಾರಗಳಲ್ಲಿ ಮುಳುಗಿರುವಾಗಲೂ ಆಧ್ಯಾತ್ಮಿಕ ದಾರಿಯನ್ನು ಹುಡುಕುವ, ಆತ್ಮಾವಲೋಕನ ಮಾಡುವ, ಅಂತರಂಗದ ಪಿಸುಮಾತುಗಳನ್ನು ಕೇಳುವ, ಆತ್ಮದ ಆದೇಶಗಳಿಗೆ ತಲೆಬಾಗುವ ಸೂಕ್ಷ್ಮ ಸಂವೇದನಾಶೀಲ ಮನಸ್ಸು ಇದು.ಮುಖವಾಡಗಳಲ್ಲಿ ಕಾಣುವುದು ಸತ್ಯದರ್ಶನವಲ್ಲ. ಆವರಣಗಳಿಂದ ಹೊರಗೆಬಂದಾಗಲೇ ನಿಜತ್ವದ ಅರಿವು.ಕವಚಗಳು ಕಳಚಿನಿಂತಾಗಲೇ ಸೃಜನಶೀಲತೆಗೆ ರಹದಾರಿ.ವಚನಕಾರರು ಹೇಳುವಂತೆ ಬೆತ್ತಲಾದರೆ ಬಯಲು. ವ್ಯಕ್ತಿತ್ವದ ಆವರಣಗಳು ಕಳಚಿ ನಿಜತ್ವದ ಅರಿವಾದಾಗಲೇ ತಿಳಿವಳಿಕೆಯುಳ್ಳ, ವಿವೇಕವಾಣಿ ಮೊಳಗುವುದು. ದೇಶ, ಭಾಷೆ, ಸಂಸ್ಕೃತಿ, ಪರಂಪರೆಯಲ್ಲಿ ಬೇರುಬಿಟ್ಟರೂ ಹೊಸದನ್ನು ಅರಿಯುವ ಅನುಭವಿಸುವ ಕುತೂಹಲ, ಜೀವನಾಸಕ್ತಿ, ತತ್ವಚಿಂತನೆ, ಅಂತರಂಗ ಬಹಿರಂಗಗಳ ವಿಮರ್ಶೆ, ಸರಿತಪ್ಪುಗಳ ತಿಳಿವಳಿಕೆ, ಜೀವನದರ್ಶನ ಮಾರ್ಗದರ್ಶನ ಎಲ್ಲವೂ ಹದವಾಗಿ ಮಿಳಿತಗೊಂಡು ಸಹೃದಯ ಓದುಗರನ್ನು ಬಹುಕಾಲ ಕವಿತೆಯ ಗುಂಗಿನಲ್ಲೇ ಮೈಮರೆಸಿಬಿಡುತ್ತವೆ. ಪಂಪನ ಕಾವ್ಯದಿಂದ ಅಕ್ಕನ ವಚನಗಳ ವರೆಗೂ ಹರಡಿದ ಜೀವನಸೂತ್ರ ಪರಿಭಾವನಾಯೋಗ್ಯ.

'ತುಳಸೀ ಕಟ್ಟೆ'(೮೧) ಕವಿಯ ಸರ್ವಧರ್ಮ ಸಮನ್ವಯತೆ, ವಿಶ್ವಮಾನವತೆಗೆ ದ್ಯೋತಕವಾದ ಸರಳ, ಸುಂದರ ಕವನ. ಮತಧರ್ಮಗಳ ಅರ್ಥಹೀನ ಕಂದಾಚಾರಗಳಿಗಿಂತ ಮನುಷ್ಯನಾಗುವುದು ಮುಖ್ಯವೆಂಬುದು ಕವಿಯ ಮನದಾಳದ ಮಾತು. ಒಂದು ಪುಟ್ಟ ಕವನದಲ್ಲಿ ವಿಶ್ವಧರ್ಮಸಮನ್ವಯದ ಸೂತ್ರವನ್ನು ಹೆಣೆದ ರೀತಿ ಅನನ್ಯ. ಮಾನವಪ್ರೀತಿ ದೇಶಕಟ್ಟುವುದಕ್ಕಿರಬೇಕೇ ಹೊರತು ಕೆಡವುದಕ್ಕಲ್ಲ. 'ಪ್ರಕೃತಿಯಾವರಣದಲಿ ನಾಗರಿಕತೆ ಕಲ್ಲು–ಗಾರೆಗೆ ಕಲಿಸಿದಂಥ ಶಿಸ್ತು'(೮೩) 'ಯಾರೋ ಕಟ್ಟಿದುದನ್ನು ಒಡೆಯುವುದು ಸರಿಯಲ್ಲವೆಂದು ಬಿಟ್ಟೆ'(ಪು.೮೪)ಎಂಬ ಸಾಲು ಇಡೀ ಕವಿತೆ ತಿಲಕಪ್ರಾಯವಾಗಿದೆ. ಜಾತ್ಯಂಧತೆಯಿಲ್ಲದ ಮತಾಂಧತೆಗಳಿಲ್ಲ ಸರ್ವಧರ್ಮಸಮನ್ವಯದ, ವಿಶ್ವಮಾನವತೆಯ ಸಿದ್ಧಾಂತವನ್ನು ಕಟ್ಟುವ ಪ್ರಯತ್ನ ಈ

.ಕವನದಲ್ಲಿದೆ.

ಕಾಲಾಂತರದಲ್ಲಿ ಮನುಷ್ಯನ ಸ್ವಾರ್ಥಪ್ರೇರಿತ ಜೀವನವಿಧಾನದಿಂದ ನಶಿಸುತ್ತಿರುವ ಸಂಸ್ಕೃತಿ, ಜೀವನಮೌಲ್ಯಗಳು, ಮಾನವ ಪ್ರೀತಿ, ಪರಿಸರ ಸ್ನೇಹ, ಬದುಕುಭಾವನೆಗಳು, ಆಶೋತ್ತರಗಳು ಇತ್ಯಾದಿ ಅಂಶಗಳನ್ನು ಅತ್ಯಂತ ಕಾಳಜಿಯಿಂದ 'ಪಂಪನ ಬನವಾಸಿ' (ಪು. ೮೫) ದಾಖಲಿಸಿದ್ದಾರೆ. ಇಲ್ಲಿ ವ್ಯಕ್ತವಾಗುವ ಪ್ರೀತಿ, ಸ್ನೇಹಗಳ ಹಪಾಹಪಿ ಮನನೀಯ. ಓದುಗರನ್ನು ಅರ್ಥಪೂರ್ಣ ಚಿಂತನೆಗೆ ಒಳಗುಮಾಡಬಲ್ಲ ಶಕ್ತಕವಿತೆ ಇದು.

'ಕುಹೂ ಕುಹೂ' (ಪು.೮೮) ಜಾಗತೀಕರಣದ ಪರಿಣಾಮವಾಗಿ ಮನುಷ್ಯಸಂಬಂಧಗಳಲ್ಲಿ, ಭಾರತೀಯ ಜನಜೀವನದಲ್ಲಿ ಉಂಟಾದ ಸ್ಥಿತ್ಯಂತರಗಳನ್ನು ಬೆರಗು, ವಿಷಾದ, ಆತಂಕಗಳ ಸಮ್ಮಿಶ್ರ ಮನಸ್ಥಿತಿಯಲ್ಲಿ ವೀಕ್ಷಿಸುವ ಸಹೃದಯ ಮನಸ್ಸಿನ ದ್ವಂದ್ವವನ್ನು ಸಮರ್ಥವಾಗಿ ಚಿತ್ರಿಸಿದೆ. ತಂತ್ರಜ್ಞಾನದ ಪರಿಣಾಮವಾಗಿ ಆಧುನಿಕೋತ್ತರ ಯಂತ್ರಯುಗದಲ್ಲಿ ಸಂಭವಿಸುವ ವಿನೂತನ ಆವಿಷ್ಕಾರಗಳನ್ನು ದಿಗ್ದರ್ಶಿಸುವುದು ಕವಿತೆಯ ಉದ್ದೇಶ. ಜ್ಞಾನವಿಜ್ಞಾನ ಲೋಕಕ್ಕೆ ಲಗ್ಗೆಹಾಕಿ ತನ್ನ ಒಡಲಲ್ಲಿ ವರ್ತಮಾನ ಜಗತ್ತಿನ ಎಲ್ಲ ಸಾಧ್ಯತೆಗಳನ್ನು ತನ್ನೊಳಗೆ ತುಂಬಿದ ಕಂಪ್ಯೂಟರ್ ವಿಸ್ಮಯವನ್ನು ಕಣ್ಣರಳಿಸಿ ವೀಕ್ಷಿಸುವ ಪರಿ ಆಪ್ಯಾಯಮಾನವಾಗಿದೆ. 'ನಿಮ್ಮ ಕಣ್ಣೆದುರೆ ನಡೆಯುವುದು ಇಡಿಯ ಲೋಕವೇ ಕೊಡು–ಕೊಳುವ ಮಾರುಕಟ್ಟೆ! ಮತ್ತೆ ಮುಂಬರುವ ಯುಗದ ಜಗದ ಬಟ್ಟೆ!(ಪು.೮೯) ಯಂತ್ರಯುಗದ ಮಾಂತ್ರಿಕ ಲೋಕದಿಂದ ವಶೀಕರಣಗೊಂಡು ನೆಲದ ಬದುಕಿನಿಂದ ದೂರವಾಗುವ, ಸಹಜಸೌಂದರ್ಯಾನುಭೂತಿಗಳಿಂದ ವಂಚಿತಗೊಳ್ಳುವ ಭಾರತೀಯ ಮನಸ್ಸುಗಳ ಬಗ್ಗೆ ಕವಿ ತೋರುವ ಕಳಕಳಿಯೂ ಗಮನಾರ್ಹ. ಯಾವುದನ್ನಾದರೂ ಪಡೆಯಬೇಕಿದ್ದರೆ ಇನ್ನಾವುದನ್ನೋ ಕಳೆದುಕೊಳ್ಳಬೇಕೆಂಬ ತಾತ್ವಿಕ ವಿಷಾದವೂ ಪ್ರಸ್ತುತ. ಸಂಕಲನದ 'ಸಂತಸದ ಶೋಧ', 'ಜೇಡ', 'ಜಾನ್ ಫ್ಲಿನ್', 'ನಾನೊಬ್ಬ ನೀಗ್ರೋ'–ಅನುವಾದಿತ ಕವನಗಳು.'ಒಬ್ಬಂಟಿತನ', 'ನನ್ನ ದೇಶಕ್ಕೆ', 'ಶಿಲಾಪ್ರತಿಮೆ', 'ಮಧ್ಯರಾತ್ರಿಯ ಹೊತ್ತು', 'ಗಿರಿಶ್ರೇಣಿಯೊಂದರ ಮೇಲೆ'ಈ ಕವನಗಳು ರಷ್ಯಾದೇಶದ ಕ್ರಾಂತಿವಿರೋಧಿ ಕವಿ ಇವಾನ್ ಬನಿನ್ ರಚಿತ ಕವನಗಳ ಅನುವಾದ.ಕವಿಯ ಪರಭಾಷಾ ಪರಿಣತಿ ಎಷ್ಟು ಉತ್ಕೃಷ್ಟವಾಗಿದೆಯೆಂದರೆ ಪ್ರತಿಯೊಂದೂ ಸ್ವತಂತ್ರಕವನವೋ ಎನ್ನುವಷ್ಟು ಸೊಗಸಾಗಿದ್ದು ಸುಲಲಿತವಾಗಿ ಓದಿಸುತ್ತವೆ. 'ಸೆರೆಮನೆಯಲ್ಲಿ' ಎಂಬುದು ನೀಳ್ಗವಿತೆ. ಇದು ಮೂಲತಃ ಅರಬ್ಬೀ ಭಾಷೆಯಲ್ಲಿ ರಚಿತವಾದ ಕವನ. ಅಹಮ್ಮದ್ ಮೊಹಮ್ಮದ್ ನೈಮನ್ ಯೆಂಬ ಪ್ರಖ್ಯಾತ ಯೆಮೆನ್ ಕ್ರಾಂತಿಕವಿ ತನಗಿಂದ ಹಿರಿಯ ಕ್ರಾಂತಿಕವಿಯಾದ ಅಲ್ ಝುಬೈರಿಯನ್ನು ಸ್ಮರಿಸಿ ಬರೆದ ಕವನ. ಸೆರೆಮನೆವಾಸದ ಕತ್ತಲೆಯ ಕುಹರದೊಳಗೆ ಪ್ರತಿಯೊಂದು ನಿಮಿಷವನ್ನೂ

ಅಸಹನೀಯ ಯಾತನೆಯಲ್ಲಿ ಕಳೆಯುವ ಖೈದಿಗಳ ಮಾನಸಿಕ ತವಕ, ತಲ್ಲಣಗಳು ಹೃದಯಕ್ಕೆ ತಟ್ಟುವಂತಿವೆ.

ಸಂಕಲನದ ಕೊನೆಯ ಕವನ. 'ನಾನೊಂದು ಕವಿತೆ ಬರೆಯುತ್ತೇನೆ' ಕಪ್ಪುಜನಾಂಗದ ಖ್ಯಾತಕವಿ ಮುತಾಬರುಕ ರಚಿತ ಕವನದ ಅನುವಾದ. 'ಕಾವ್ಯವೆಂಬುದು ಕವಿಯ ಕೈಯೊಳಗೊಂದು ಸ್ವಾತಂತ್ರ್ಯದ ಶಸ್ತ್ರವಾಗಿರಬಹುದೆಂದು ನಾನು ತಿಳಿಯುತ್ತೇನೆ'(ಪು.೧೦೮) ಎಂಬ ಸಾಲು ಕವಿಗಿರುವ ಸ್ವಾತಂತ್ರ್ಯ, ಸೃಜನಶೀಲತೆಗೆ ಸಾಕ್ಷಿಯಾಗಿ, ಗಮನಾರ್ಹವಾಗುತ್ತದೆ, ಕಾವ್ಯಲೋಕದಲ್ಲಿ ಕವಿಯೇ ಸಾರ್ವಭೌಮ, ತನ್ನ ಲೋಕವನ್ನು ತನಗಿಷ್ಟಬಂದಂತೆ ಆಳುವ ಅಧಿಕಾರ ಅವನಿಗಿದೆ ಎಂಬ ಕಾವ್ಯಮೀಮಾಂಸೆಯ ಸಿದ್ಧಾಂತಕ್ಕೆ ಪೂರಕವಾಗುವ ಈ ಮಾತುಗಳು ಸನದಿಯವರ ಅಂತರಂಗದ ಧ್ವನಿಯೋ ಎಂಬಷ್ಟು ಇವು ಆತ್ಮೀಯವಾಗುತ್ತವೆ. ■

ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೩

# ೬. ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಲಿಂಗಾಂಗ ಸಾಮರಸ್ಯರೂಪ ಮೋಕ್ಷ

–ವಿದ್ವಾನ್, ಡಾ॥ ಕೆ.ಎಂ. ಮಹದೇವಯ್ಯ*

**ಪೀಠಿಕೆ :**

ಭಾರತೀಯ ದರ್ಶನಗಳಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮತ್ತು ಶಕ್ತಿ ವಿಶಿಷ್ಟಾದ್ವೈತ ದರ್ಶನವೇ ಮೊದಲಾದ ಅನೇಕ ಪ್ರಭೇದಗಳಿವೆ.

**ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ ।**
**ನಿರ್ದಿಷ್ಟಮುತ್ತರೇ ಭಾಗೇ ವೀರಶೈವಮತಂ ಪರಂ ॥** (ಸಿದ್ಧಾಂತಶಿಖಾಮಣಿ, ೫–೧೪)

"ಪರಮಪವಿತ್ರವಾದ ವೀರಶೈವಮತಸ್ವರೂಪವು ಕಾಮಿಕಾದಿ ವಾತುಲಾಂತವಾದ ಸಿದ್ಧಾಂತ ನಾಮಕ ಮಹಾತಂತ್ರದ ಉತ್ತರ ಭಾಗದಲ್ಲಿ ಶಿವನಿಂದಲೇ ಹೇಳಲ್ಪಟ್ಟಿರುವುದು."

**ವಿ ಶಬ್ದೇನೋಚ್ಯತೇ ವಿದ್ಯಾ ಶಿವ ಜೀವೈಕ್ಯಬೋಧಿಕಾ ।**
**ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಸ್ತು ತೇ ಮತಾಃ ॥**

(ಸಿದ್ಧಾಂತಶಿಖಾಮಣಿ, ೫–೧೫)

ಲಿಂಗಾಂಗಸಾಮರಸ್ಯರೂಪ ಶಿವಜೀವೈಕ್ಯ ವಿದ್ಯೆಯನ್ನು 'ವಿ' ಶಬ್ದವು ಬೋಧಿಸುತ್ತದೆ. ಈ ರೀತಿಯಾದ ಲಿಂಗಾಂಗ ಸಾಮರಸ್ಯ (ಪರಮಾತ್ಮ–ಜೀವಾತ್ಮ) ವಿದ್ಯೆಯಲ್ಲಿ ಯಾರು ವಿನೋದದಿಂದ ಕ್ರೀಡಿಸುತ್ತಾರೆಯೋ ಅವರು ವೀರಶೈವರೆಂದು ಹೇಳಿಸಿಕೊಳ್ಳುವರು. "ಅನ್ಯೇಷಾಮಪಿ ದೃಶ್ಯತೇ" (೬–೩–೧೩೭) ಎಂಬ ಪಾಣಿನಿಯ ಸೂತ್ರಾನುಸಾರವಾಗಿ, "ವಿ" ಶಬ್ದಕ್ಕೆ ದೀರ್ಘವು ಪ್ರಾಪ್ತವಾಗುವುದರಿಂದ "ವೀರ" ಎಂಬ ಶಬ್ದವು ಸಿದ್ಧವಾಗುತ್ತದೆ.

* ಪ್ರಾಧ್ಯಾಪಕರು, ಶಕ್ತಿವಿಶಿಷ್ಟಾದ್ವೈತವೇದಾಂತ ವಿಭಾಗ, ಸರ್ಕಾರಿ ಮಹಾರಾಜ ಸಂಸ್ಕೃತ ಕಾಲೇಜು, ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಘಟಕ ಕಾಲೇಜು, ನ್ಯೂ ಸಯ್ಯಾಜಿರಾವ್ ರಸ್ತೆ, ಮೈಸೂರು–೨೪, ಮೊಬೈಲ್ : ೯೯೮೦೦೫೭೫೬೩

ಶಕ್ತಿವಿಶಿಷ್ಟಾದ್ವೈತ ದರ್ಶನವು ಸಿದ್ಧಾಂತ ಮತ್ತು ಸಂಪ್ರದಾಯ ಎರಡನ್ನು ಒಳಗೊಂಡಿದ್ದು ಶಿವಾಂಶನಾದ ಜೀವಾತ್ಮನು ಪರಮಾತ್ಮನೊಡನೆ ಐಕ್ಯವನ್ನು ಹೊಂದುವುದೇ ಈ ಸಿದ್ಧಾಂತದ ಪರಮ ರಹಸ್ಯ.

**ಚತುರ್ವಿಧ ಪುರುಷಾರ್ಥಗಳು :**

**"ಇಹ ಖಲು ಧರ್ಮಾರ್ಥಕಾಮಮೋಕ್ಷಾಖ್ಯೇಷು ಚತುರ್ವಿಧ ಪುರಷಾರ್ಥೇಷು ಮೋಕ್ಷ ಏವ ಪರಮಃ ಪುರುಷಾರ್ಥಃ"** (ವೇದಾಂತಪರಿಭಾಷಾ, ಪುಟ-೧೪)

ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳು ನಾಲ್ಕು ವಿಧವಾದ ಪರಮಪುರುಷಾರ್ಥಗಳಿರುವುವು. ಮೋಕ್ಷವು ಪರಮಾತ್ಮನನ್ನು ನಾವು ಅರಿತು ಅವನೊಡನೆ ಬೆರೆತು ಸಮರಸವಾಗಿ ಅವನಲ್ಲಿಯೇ ಸೇರಿಕೊಳ್ಳು (ಐಕ್ಯಗೊಳ್ಳು)ವುದರಿಂದ ಅತ್ಯಂತ ಶ್ರೇಷ್ಠವಾದ ಪರಮ ಪುರುಷಾರ್ಥವು ಮೋಕ್ಷವೇ ಆಗಿರುತ್ತದೆ. ಎಲ್ಲಾ ದರ್ಶನಗಳ ಅಂತಿಮಗುರಿಯೂ ಇದೇ ಆಗಿದೆ.

ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ವೀರಶೈವಸಿದ್ಧಾಂತ ಎಂಬ ಹೆಸರಿನಿಂದ ವ್ಯವಹರಿಸಲಾಗಿದೆ. ಇದಕ್ಕೆ ಬೇರೆ ನಿರ್ವಚನಗಳಿದ್ದು ಅವುಗಳು ಮುಂದಿನಂತಿವೆ :

ವಿಶೇಷಾದ್ವೈತ, ವಿಶಿಷ್ಟಾದ್ವೈತ, ಶಿವಾದ್ವೈತ, ದ್ವೈತಾದ್ವೈತ ಅಥವಾ ಭೇದಾಭೇದ ಶಿವಯೋಗ ಮತ್ತು ಷಟ್‌ಸ್ಥಲಸಿದ್ಧಾಂತ.

**.ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ ಸ್ವರೂಪ :**

ವೀರಶೈವ ಧರ್ಮವು ವಿಶ್ವಕ್ಕೆ ಒಡೆಯನು ಮತ್ತು ಪಂಚಕೃತ್ಯ (ಸೃಷ್ಟಿ, ಸ್ಥಿತಿ, ಸಂಹಾರ, ತಿರೋಭಾವ ಮತ್ತು ಮೋಕ್ಷ) ಗಳಿಗೆ ಕಾರಣೀಭೂತನಾದ ಶಿವನನ್ನೇ ಕುರಿತು ತಿಳಿಸುವುದು. ಈ ಧರ್ಮದಲ್ಲಿ ಬ್ರಹ್ಮವಿದ್ಯೆಯನ್ನು ಸವಿಸ್ತಾರವಾಗಿ ತಿಳಿಸಿದ್ದು, ಇದು ಮುಮುಕ್ಷುಗಳಿಗೆ ಹೆಚ್ಚು ಉಪಯುಕ್ತವೆನಿಸಿದೆ. ಮೋಕ್ಷಕ್ಕೆ ಕಾರಣೀಭೂತವಾದ ಪತಿಕರ್ಮ ಮತ್ತು ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುವ ಪಶುಕರ್ಮ ಎಂದು ಕರ್ಮಗಳಲ್ಲಿ ಎರಡು ವಿಧವಿದೆ. ಪಶುಕರ್ಮದಲ್ಲಿ ಶಿವಾಂಶನಾದ ಜೀವನಿಗೂ ಶಿವನಿಗೂ (ಅಂಗಕ್ಕೂ-ಲಿಂಗಕ್ಕೂ) ಸಾಮರಸ್ಯವನ್ನು ಕಲ್ಪಿಸಿಲ್ಲ. ಈ ಬಗ್ಗೆ ಪ್ರಮಾಣಗಳನ್ನು ಉಪನಿಷತ್ತುಗಳಲ್ಲಿ ಮತ್ತು ಶೈವಾಗಮಗಳಲ್ಲಿ ಸಾಧ್ಯ, ಸಾಧನ ಖಂಡಗಳಲ್ಲಿ ಋಷಿಗಳ ಪ್ರಶ್ನೋತ್ತರಗಳ ಮೂಲಕ ತಿಳಿಸಲಾಗಿದೆ. ಶೈವಾಗಮಗಳು ಬಂಧ-ಮೋಕ್ಷಗಳ ವಿವೇಚನೆಯನ್ನು ಮತ್ತು ಅವುಗಳಿಂದ ಬಿಡುಗಡೆ ಹೊಂದಿ ಮೋಕ್ಷವನ್ನು ಪಡೆಯಲು ಜೀವಿಗೆ ಬೇಕಾಗುವ ಸಾಧನಗಳು ಮತ್ತು ಉಪಾಯಗಳನ್ನು ತಿಳಿಸಿವೆ.

ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಪತಿ, ಪಶು, ಪಾಶ ಎಂದು ಮೂರು ಪದಾರ್ಥಗಳಿದ್ದು, ಅವುಗಳನ್ನು ಕ್ರಮವಾಗಿ ಪರಶಿವಬ್ರಹ್ಮ (ಲಿಂಗ), ಜೀವಾತ್ಮ (ಅಂಗ), ಪಾಶ (ಬಂಧ) ಎಂದು ವ್ಯವಹರಿಸಲಾಗಿದೆ. ಇವುಗಳ ಸ್ಥೂಲ ಪರಿಚಯವನ್ನು ಈ ಕೆಳಕಂಡಂತೆ ನಿರೂಪಿಸಲಾಗಿದೆ.

**ಪತಿ–ಪರಶಿವಬ್ರಹ್ಮ ಸ್ವರೂಪ ಮತ್ತು ಶಕ್ತಿವಿಶಿಷ್ಟತ್ವ :**

**"ಪತಿಃ ಸಾಕ್ಷಾತ್ ಪರಬ್ರಹ್ಮ".**

**ದಿವ್ಯೋಹ್ಯಮೂರ್ತಃ ಪುರುಷಃ ಸಬಾಹ್ಯಾಭ್ಯಂತರೋ ಹ್ಯಜಃ ।**

**ಅಪ್ರಾಣ್ಯೋಹ್ಯಮನಾಃ ಶುಭ್ರೋಹ್ಯಕ್ಷರಾತ್ಪರತಃ ಪರಮ್ ॥**

(ಮುಂಡಕೋಪನಿಷತ್, ೨–೧–೨)

ಸ್ವತಂತ್ರನು, ಸರ್ವಜ್ಞನು, ಸ್ವಪ್ರಕಾಶನು, ಶಕ್ತಿವಿಶಿಷ್ಟನು ಅಪರಿಚ್ಛಿನ್ನ ಪರಿಮಾಣವುಳ್ಳ, ಪರಮಪುರುಷನೆನಿಸುವ ಪರಮಾತ್ಮನು ಭಕ್ತರ ಅನುಗ್ರಹಕ್ಕಾಗಿ "ಘೃತಕಾಠಿನ್ಯ ನ್ಯಾಯದಿಂದ" ಯೋಗಾಂಗ–ಭೋಗಾಂಗ–ತ್ಯಾಗಾಂಗಗಳೆಂಬ ಮೂರು ವಿಧದ ಶರೀರಗಳಲ್ಲಿ "ಭಾವ–ಪ್ರಾಣ–ಇಷ್ಟಲಿಂಗ"ವೆಂಬ ಮೂರು ವಿಧದ ಲಿಂಗಗಳಿಂದ ನೆಲೆಸಿರುವನು. ಅವನು ಜನ್ಮವಿಲ್ಲದವನು ಅಂದರೆ ಹುಟ್ಟುವುದು, ಇರುವುದು, ಬೆಳೆವುದು, ಪರಿಣಾಮ ಹೊಂದುವುದು, ಕ್ಷಯಿಸುವುದು ಮತ್ತು ನಾಶ ಹೊಂದುವುದು (ಜನ್ಮ, ಸ್ಥಿತಿ, ವೃದ್ಧಿ, ಪರಿಣಾಮ, ಅಪಕ್ಷಯ ಮತ್ತು ವಿನಾಶ) ಎಂಬ ಷಡ್ಭಾವವಿಕಾರಗಳಿಲ್ಲದವನು ಎಂದರೆ ಷಡೂರ್ಮಿಗಳಿಲ್ಲದವನೆಂದು ಅರ್ಥ. ಪ್ರಾಣವಿಲ್ಲದವನೂ, ಆದ್ದರಿಂದಲೇ ಸಂಕಲ್ಪ, ವಿಕಲ್ಪ ಮನಸಿಲ್ಲದವನೂ, ಆದ್ದರಿಂದಲೇ ಯಾವಾಗಲೂ ನಿರ್ಮಲನೂ, ಎಂದರೆ "ಜೀವನು ಪರಮಾತ್ಮನ ಅಂಶವಾಗಿದ್ದರೂ ಅವನು ಕಿಂಚಿದ್‌ಅಜ್ಞನಾಗಿ ರಾಗದ್ವೇಷಗಳಿಗೆ ಒಳಗಾಗಿ ಮಲಾವೃತನಾಗುವನು". "ಪರಮಾತ್ಮನು ಸರ್ವಜ್ಞನಾದ್ದರಿಂದ ರಾಗದ್ವೇಷಗಳಿಗೆ ಒಳಗಾಗದೇ ಮಲಾವೃತನಾಗುವುದಿಲ್ಲ." ತನಗಿಂತ ವಿಲಕ್ಷಣವಾದ, ಜಡಪ್ರಕೃತಿಗಿಂತ ಪರಮನೆನಿಸಿರುವ, ಅಕ್ಷರಶಬ್ದವಾಚ್ಯನಾಗಿರುವ, ಚಿಚ್ಛಕ್ತಿಗಿಂತಲೂ ಅಂದರೆ, ಅಂತಹ ಚಿಚ್ಛಕ್ತಿಗೆ ಅಧಿಷ್ಠಾನವಾಗಿರುವುದರಿಂದಲೇ ಪರಮಶ್ರೇಷ್ಠನೆನಿಸಿದ, ಸರ್ವಜ್ಞಗುಣಗಳುಳ್ಳವನೇ ಪರಶಿವಬ್ರಹ್ಮನು. ಅವನಿಗಿಂತಲು ದೊಡ್ಡದು ಯಾವುದು ಇಲ್ಲ. ಪರಮಾತ್ಮನು ಸೃಷ್ಟಿ, ಸ್ಥಿತಿ, ಸಂಹಾರ, ತಿರೋಭಾವ ಮತ್ತು ಅನುಗ್ರಹಗಳೆಂಬ ಐದು ಕೃತ್ಯಗಳಿಗೆ ಒಡೆಯನಾಗಿದ್ದಾನೆ.

ಸಿದ್ಧಾಂತಶಿಖಾಮಣಿಯಲ್ಲಿ ಈ ಕೆಳಗಿನ ಶ್ಲೋಕಗಳಲ್ಲಿ ಲಿಂಗದಸನಾತನತ್ವವನ್ನು ಮತ್ತು ಸ್ವರೂಪವನ್ನು ನಿರೂಪಿಸಿದೆ :

ಅಪರಿಚ್ಛಿನ್ನಮವ್ಯಕ್ತಂ ಲಿಂಗಂ ಬ್ರಹ್ಮ ಸನಾತನಂ ।
ಉಪಾಸನಾರ್ಥಮಂತಃಸ್ಥಂ ಪರಿಚ್ಛಿನ್ನಂ ಸ್ವಮಾಯಯಾ ॥
ಲಯಂ ಗಚ್ಛತಿ ಯತ್ರೈವ ಜಗದೇತಚ್ಚರಾಚರಂ ।
ಪುನಃ ಪುನಃ ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮ ಶಾಶ್ವತಂ ॥
ತಸ್ಮಾಲ್ಲಿಂಗಮಿತಿ ಖ್ಯಾತಂ ಸತ್ತಾನಂದಚಿದಾತ್ಮಕಂ ।
ಬೃಹತ್ತ್ವಾದ್ಬೃಂಹಣತ್ವಾಚ್ಚ ಬ್ರಹ್ಮಶಬ್ದಾಭಿಧೇಯಕಂ ॥

(ಸಿದ್ಧಾಂತಶಿಖಾಮಣಿ, ೬–೩೫, ೩೬, ೩೭)

"ಪರಬ್ರಹ್ಮಸ್ವರೂಪವಾದ ಲಿಂಗವು" ಭಕ್ತರ ಉಪಾಸನಾರ್ಥವಾಗಿ ತನ್ನಲ್ಲಿರುವ ಮಾಯಾ ಶಕ್ತಿಯಿಂದ ವಿಭಾಗವನ್ನು ಹೊಂದುವುದು. ಈ ರೀತಿಯ ಲಿಂಗವು ಅಪರಿಚ್ಛಿನ್ನವೂ, ಅವ್ಯಕ್ತವೂ, ಸನಾತನವೂ, ಬ್ರಹ್ಮಪದವಾಚ್ಯವೂ, ಅಂತಃಸ್ಥಿತವೂ ಆಗಿರುವುದು. "ಈ ಚರಾಚರಾತ್ಮಕವಾದ ಜಗತ್ತು ಯಾವ ವಸ್ತುವಿನಲ್ಲಿ ಲಯವನ್ನು ಹೊಂದುವುದೋ, ಪುನಃ ಪುನಃ ಉತ್ಪತ್ತಿಯನ್ನು ಹೊಂದುವುದೋ, ಆ ನಿತ್ಯವಾದ ಪರಬ್ರಹ್ಮವೇ ಲಿಂಗವೆಂದು ಹೇಳಿಸಿಕೊಳ್ಳುವುದು." ಸಚ್ಚಿದಾನಂದ ಸ್ವರೂಪವಾದ ಆ ಲಿಂಗವು ಮಹತ್ತ್ವವುಳ್ಳುದಾದುದರಿಂದಲೂ, ತನ್ನನ್ನು ಆಶ್ರಯಿಸಿದವರಲ್ಲಿ ಅಂಥ ಮಹತ್ತ್ವವನ್ನೇ ಉಂಟುಮಾಡುವುದರಿಂದಲೂ ಬ್ರಹ್ಮಶಬ್ದವಾಚ್ಯವಾಗಿರುವುದು.

**ಪರಶಿವಬ್ರಹ್ಮ ಲಕ್ಷಣ :**

ಬ್ರಹ್ಮದ ಲಕ್ಷಣವನ್ನು ಶ್ರೀಪತಿಪಂಡಿತರು ತಮ್ಮ ಶ್ರೀಕರಭಾಷ್ಯದಲ್ಲಿ ಈ ಕೆಳಕಂಡಂತೆ ಪ್ರತಿಪಾದಿಸಿ ನಿರೂಪಿಸಿದ್ದಾರೆ –

**ವೇದಾಗವೋಭಯವೇದಾಂತಪ್ರತಿಪಾದಿತ ಸ್ವಾಭಾವಿಕಾನಂತಶಕ್ತಿವಿಶಿಷ್ಟ ಜಗದುಭಯಕಾರಣ ಪಶುಪಾಶನಿಯಮಕ ಸಕಲ–ನಿಷ್ಕಲಸ್ಥೂಲಸೂಕ್ಷ್ಮ ಚಿದಚಿತ್‌ಪ್ರಕಾಶಕ ಸತ್ಯಜ್ಞಾನಾನಂತ ಕಲ್ಯಾಣಗುಣವಿಭವಾಶ್ರಯತ್ವಂ ಬ್ರಹ್ಮತ್ವಂ"** ಎಂದು ಬ್ರಹ್ಮಲಕ್ಷಣವನ್ನು ನಿರ್ವಚಿಸಲಾಗಿದೆ. (ಶ್ರೀಕರಭಾಷ್ಯ, ಸಂಪುಟ–೨ ಪುಟ–೧೪೪)

ವೇದ ಮತ್ತು ಆಗಮ (ನಿಗಮಾಗಮ)ವೆಂಬ ಎರಡು ಬಗೆಯ ವೇದಾಂತಗಳಲ್ಲಿ ಪ್ರತಿಪಾದಿತವಾಗಿ, ಸ್ವಾಭಾವಿಕವಾಗಿ, ಅನಂತವೂ ಅದ್ಭುತವೂ, ಆದ ಶಕ್ತಿಯೊಡಗೂಡಿ, ಜಗತ್ತಿಗೆ ಉಪಾದಾನ ಕಾರಣನೂ, ನಿಮಿತ್ತ ಕಾರಣನೂ ಆಗಿ ಪಶುಗಳೆನಿಸಿದ ಜೀವರಿಗೂ, ಪಾಶವೆನಿಸಿದ ಪ್ರಕೃತಿಗೂ ನಿಯಾಮಕನಾಗಿ, ಸಕಲನೂ, ನಿಷ್ಕಲನೂ ಆಗಿ, ಸ್ಥೂಲ–ಸೂಕ್ಷ್ಮವಾದಚೇತನರಿಗೂ, ಅಚೇತನ ವಸ್ತುಗಳಿಗೂ ಪ್ರಕಾಶಕನಾಗಿ, ಸತ್ಯ, ಜ್ಞಾನ ಇವೇ ಮೊದಲಾದ ಅನಂತಕಲ್ಯಾಣಗುಣಗಳ ವೈಭವಕ್ಕೆ ಆಶ್ರಯನೂ ಆಗಿರುವ ಚೇತನವೇ

ಪರಬ್ರಹ್ಮವೆನಿಸಿದೆ ಎಂದು ಶ್ರೀಪತಿಪಂಡಿತರು ಪರಶಿವಬ್ರಹ್ಮದ ಲಕ್ಷಣವನ್ನು ವಿಶಿಷ್ಟ ರೀತಿಯಲ್ಲಿ ವರ್ಣಿಸಿ ಪ್ರತಿಪಾದಿಸಿದ್ದಾರೆ.

ಶಿವಶರಣರು ಸೃಷ್ಟಿಪೂರ್ವದಲ್ಲಿನ ಬ್ರಹ್ಮಸ್ವರೂಪವನ್ನು ಸಹಜ, ಬಯಲು, ಸರ್ವಶೂನ್ಯ, ನಿಶ್ಶೂನ್ಯ, ನಿರಾಲಂಬ ಎಂದು ಮುಂತಾಗಿ ವಿಶ್ಲೇಷಿಸಿದ್ದಾರೆ. ಆ ಸರ್ವಶೂನ್ಯವು ಅಸ್ತಿತ್ವವಿಲ್ಲದ ಶೂನ್ಯವಲ್ಲ. ಅದು ಬೌದ್ಧರ ಶೂನ್ಯ (Void) ವಲ್ಲ, ಅದು ಎಲ್ಲವನ್ನೂ ಒಳಗೊಂಡ ಸರ್ವಾಸ್ತಿವಾಚಕ. ಆದ್ದರಿಂದಲೇ ಅದು "ಪರಿಪೂರ್ಣ"ವೆನಿಸಿದೆ. (ಶ್ರೀಕರಭಾಷ್ಯ, ಸಂಪುಟ–೨, ಪುಟ–೧೪೪).

**ಪಶು (ಜೀವ) ಸ್ವರೂಪ :**

ಮುಂಡಕೋಪನಿಷತ್ತಿನಲ್ಲಿ ಮತ್ತು ಶ್ವೇತಾಶ್ವತರೋಪನಿಷತ್ತಿನಲ್ಲಿ ಈ ಕೆಳಗಿನ ಶ್ಲೋಕದಲ್ಲಿ ಜೀವಾತ್ಮನ ಸ್ವರೂಪವನ್ನು ನಿರೂಪಿಸಿ ಪ್ರತಿಪಾದಿಸಲಾಗಿದೆ.

**ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ।**

(ಮುಂಡಕೋಪನಿಷತ್, ೩–೧–೨; ಶ್ವೇತಾಶ್ವತರೋಪನಿಷತ್, ೪–೭)

ಜೀವಿಯು ಮಾಯೆಯ ವಶವಾಗಿ, ಸಾಮರ್ಥ್ಯವಿಲ್ಲದುದರಿಂದ, ಮಲತ್ರಯರೂಪ ಅಜ್ಞಾನದಿಂದ ಜೀವಿಯು ಬಂಧಿತನಾಗಿ ತನ್ನ ಪರಮೈಶ್ವರ್ಯವನ್ನು ಕಳೆದುಕೊಂಡು, ಜೀವಾತ್ಮನು ತಾನು ಶಿವಾಂಶವೆಂಬ ಸ್ವರೂಪವನ್ನು ಮರೆತು ಮೂಢನಾಗಿರುವನು. ಪುರುಷತತ್ತ್ವನೆನಿಸಿದ ಜೀವನು ಅಭಿನ್ನವಾದ ಶರೀರವೆಂಬ ವೃಕ್ಷದಲ್ಲಿ ಅನಾತ್ಮನಾದ ಶರೀರವು ನಾನೇ ಎಂಬ ಅಭಿಮಾನದಿಂದ ಕೂಡಿದವನಾಗಿ ಪರಮಾತ್ಮನಿಗಿಂತ ಭಿನ್ನನಾಗಿ ರಾಗದ್ವೇಷಗಳಿಗೆ ಒಳಗಾಗಿ ಮಲತ್ರಯ (ಆಣವ, ಮಾಯೆಯ, ಕಾರ್ಮಿಕ)ಗಳಿಂದ ಆವೃತನಾಗಿ ಕಿಂಚಿದ್‌ಅಜ್ಞನಾಗಿ ಸಂಸಾರವೆಂಬ ಸಾಗರದಲ್ಲಿ ಮುಳುಗಿ, ಬಳಲಿ, ಬೆಂಡಾಗಿ ದುಃಖಿಸುತ್ತಿರುವನು.

**ಅನಾದ್ಯವಿದ್ಯಾಸಂಬಂಧಾತ್ತದಂಶೋ ಜೀವನಾಮಕಃ ॥**

**(ಸಿದ್ಧಾಂತಶಿಖಾಮಣಿ, ೫–೩೪)**

ತನ್ನಲ್ಲಿ ನಿತ್ಯ ಸಂಬಂಧದಿಂದಿರುವ ವಿಮರ್ಶಶಕ್ತಿಯಲ್ಲಿ ಅಡಕವಾಗಿರುವ ಅನಾದಿ ಮಾಯೆಯ ಸಂಬಂಧದಿಂದ ಆ ಪರಶಿವನ ಅಂಶವು 'ಜೀವ'ನೆನಿಸಿಕೊಳ್ಳುವುದು.

**ಚಿದ್ವತ್ ತಚ್ಛಕ್ತಿ ಸಂಕೋಚನಾನ್ಮಲಾವೃತ: ಸಂಸಾರೀ ॥**

(ಮುಂಡಕೋಪನಿಷತ್, ೩–೧–೧ರ ಮಂತ್ರಭಾಷ್ಯದಲ್ಲಿ ಉಲ್ಲೇಖಿತ)

ಎಂಬ ಶಕ್ತಿಸೂತ್ರದ ಪ್ರಮಾಣಾನುಸಾರಾಗಿ ಶಿವಾಂಶವಾದ ಜೀವನಲ್ಲಿ ಶಿವನಲ್ಲಿರುವ ತ್ರಿವಿಧ ಶಕ್ತಿಗಳಾದ ಇಚ್ಛಾ, ಜ್ಞಾನ, ಕ್ರಿಯಾಶಕ್ತಿಗಳು ಸಂಕುಚಿತವಾಗಿ ಆಣವ, ಮಾಯೇಯ ಮತ್ತು ಕಾರ್ಮಿಕ ಮಲಗಳೆನಿಸಿದವು. ಆದ್ದರಿಂದಲೇ, "ಮಲಾವೃತಃ ಸಂಸಾರೀ" ಎಂಬ ಉಕ್ತಿಯಂತೆ ಈ ತ್ರಿವಿಧಮಲಗಳು ಆತ್ಮನನ್ನು ಆಚ್ಛಾದಿಸಿದವು. ಇದರಿಂದ ಆತ್ಮನು ತುದಿ-ಮೊದಲಿಲ್ಲದ ಸಂಸಾರವೆಂಬ ಭವಬಂಧನದಲ್ಲಿ ಸಿಲುಕಿ ಬೆಂಕಿಯಲ್ಲಿ (ಕಾಳ್ಗಿಚ್ಚಿನಲ್ಲಿ) ಬೆಂದು ಬೆಂಡಾಗಿ ಅಂತಹ ಬಂಧನದಿಂದ ಬಿಡುಗಡೆ ಹೊಂದಲು ಗುರುವಿನ ಮೊರೆ ಹೋಗುವನು ಮತ್ತು ಗುರುಕೃಪೆಯು ಪ್ರಾಪ್ತಿಯಾಗಲು ಶಿವಕೃಪೆಯು ಪ್ರಾಪ್ತವಾಗಿ ನಿತ್ಯಸುಖವನ್ನು ಪಡೆಯುವನು. ಆದ್ದರಿಂದ ಜೀವಾತ್ಮನಲ್ಲಿ ದೀಕ್ಷೆಯೇ ಮೊದಲನೆಯ ಪತಿಕರ್ಮ.

**ಜೀವಲಕ್ಷಣ :**

ಶ್ರೀಪತಿಪಂಡಿತರು ತಮ್ಮ ಶ್ರೀಕರಭಾಷ್ಯ ಗ್ರಂಥದಲ್ಲಿ ಜೀವಾತ್ಮನ ಲಕ್ಷಣವನ್ನು ಈ ಕೆಳಕಂಡಂತೆ ನಿರೂಪಿಸಿದ್ದಾರೆ-

"ಅನಾದಿಸ್ವಾಭಾವಿಕಮಾಯಾಪಾಶಬದ್ಧಘೋರಾಪಾರನಿಸ್ಸಾರಸಂಸಾರವ್ಯಾಪಾರ ತಾಪತ್ರಯಾನಲದಂದಹ್ಯಮಾನ ನಾನಾಶರೀರಪ್ರವೇಶನಿರ್ಗಮನ ವರ್ಣಾಶ್ರಮಾಭಿಮಾನ ವಿಶಿಷ್ಟದಂದಹ್ಯಮಾನಕಾಮಕ್ರೋಧಾದ್ಯನುಸ್ಯೂತಸುಖದುಃಖಾಶ್ರಯತ್ತ್ವಂ ಜೀವತ್ತ್ವಂ" (ಶ್ರೀಕರಭಾಷ್ಯ, ಸಂಪುಟ-೨, ಪುಟ-೧೪೫).

ಅನಾದಿಯೂ, ಸ್ವಾಭಾವಿಕವೂ ಆದ ಮಾಯಾ ಪಾಶದಿಂದ ಬದ್ಧನಾಗಿ, ಭೀಕರವೂ, ಅಪಾರವೂ, ನಿಸ್ಸಾರವೂ ಆದ ಸಂಸಾರದಲ್ಲಿ ವ್ಯವಹರಿಸುತ್ತ ಆಧ್ಯಾತ್ಮಿಕ, ಆದಿದೈವಿಕ, ಆದಿಭೌತಿಕವೆಂಬ ಮೂರು ಪಾಪ (ದುಃಖತ್ರಯ)ಗಳೆಂಬ ಬೆಂಕಿಯಲ್ಲಿ ಬೆಂದು, ಅನೇಕ ಶರೀರಗಳಿಗೆ ಹೋಗುತ್ತಲೂ, ಬರುತ್ತಲೂ, ವರ್ಣ ಮತ್ತು ಆಶ್ರಮಗಳ ಅಭಿಮಾನದಿಂದ ಕೂಡಿ, ಕಾಮಕ್ರೋಧಗಳಿಂದಲೂ, ರಾಗದ್ವೇಷಗಳಿಂದಲೂ ಸಂಭವಿಸುವ ಸುಖದುಃಖಗಳನ್ನು ಅನುಭವಿಸುತ್ತಿರುವ ಚೇತನವೇ ಜೀವವೆನಿಸುವುದು.

ಶಿವಶರಣರು ಜೀವಸ್ವರೂಪವನ್ನು ಕುರಿತು-"ಅಖಂಡ ಜ್ಯೋತಿರ್ಮಯವಾದ ಮಹಾಲಿಂಗವು ತನ್ನ ಸ್ವಲೀಲಾ ಸ್ವತಂತ್ರತೆಯಿಂದ ತನ್ನ ತಾನರ್ಚಿಸಿ ಪೂಜಿಸಿಕೊಳ್ಳುವ ಒಂದು ಲೀಲಾವಿಲಾಸದಿಂದ ತನ್ನ ಅಖಂಡ ಚಿಚ್ಛಕ್ತಿಯ ಸಹಸ್ರಾಂಶದೊಳಗೊಂದಂಶವನ್ನು ಬೇರ್ಪಡಿಸಿತು." ಅದೇ ಜೀವಾತ್ಮವಾಯಿತು ಎನ್ನುತ್ತಾರೆ.

**ವೀರಶೈವದ ವೈಶಿಷ್ಟ್ಯ (ಶಿವಜೀವರಿಗೆ ಭೇದಾಭೇದ ಸಮರ್ಥನೆ) :**

ಶ್ರೀಮೊಗ್ಗೆಯ ಮಾಯಿದೇವರು ತಮ್ಮ ಅನುಭವಸೂತ್ರದಲ್ಲಿ ಈ ಕೆಳಗಿನ ಶ್ಲೋಕಗಳಲ್ಲಿ ಲಿಂಗಸ್ಥಲ ಮತ್ತ ಅಂಗಸ್ಥಲಗಳ ಸ್ವರೂಪವನ್ನು ನಿರೂಪಿಸಿದ್ದಾರೆ. ಆಗಮದಲ್ಲಿ ಬ್ರಹ್ಮವು ಸ್ಥಲ ಶಬ್ದದಿಂದ ಕರೆಯಲ್ಪಡುತ್ತದೆ. ಸ್ಥಲವು ಬ್ರಹ್ಮದ ಸ್ವಸ್ಥಾವಸ್ಥೆ.

**ಸ್ಥೀಯತೇ ಲೀಯತೇ ಯತ್ರ ಜಗದೇತಚ್ಚರಾಚರಮ್ ।**
**ತದ್ಬ್ರಹ್ಮಸ್ಥಲಮಿತ್ಯಾಹುಃ ಸ್ಥಲತತ್ತ್ವವಿಶಾರದಾಃ ॥** (ಅನುಭವಸೂತ್ರ ೨-೧)
**ಸ್ವಶಕ್ತಿಕ್ಷೋಭಮಾತ್ರೇಣ ಸ್ಥಲಂ ತದ್ದ್ವಿವಿಧಂ ಭವೇತ್ ।**
**ಏಕಂ ಲಿಂಗಸ್ಥಲಂ ಪ್ರೋಕ್ತಮನ್ಯದಂಗಸ್ಥಲಂ ಸ್ಮೃತಮ್ ॥** (ಅನುಭವ ಸೂತ್ರ ೧-೧)
**ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಮ್ ।**
**ತದೇತಲ್ಲಿಂಗಮಿತ್ಯುಕ್ತಂ ಲಿಂಗತತ್ತ್ವಪರಾಯಣೈಃ ॥** (ಅನುಭವಸೂತ್ರ ೩-೨)
**ಅನಾದ್ಯಂತಮಜಂ ಲಿಂಗಂ ತತ್ಪರಂ ಪರಮಂ ಪ್ರತಿ ।**
**ಯದ್ಗಚ್ಛತಿ ಮಹಾಭಕ್ತ್ಯಾ ತದಂಗಮಿತಿ ನಿಶ್ಚಿತಮ್ ॥**
**ಅಂ ಭವೇತ್ ಪರಮಂಬ್ರಹ್ಮ ತದ್ಗತಂ ತತ್ಪರಾಯಣಮ್ ।**
**ಅಂಗಸ್ಥಲಮಿತಿ ಪ್ರಾಹುರಂಗತತ್ತ್ವವಿಶಾರದಾಃ ॥** (ಅನುಭವಸೂತ್ರ, ಅಧಿಕರಣ ೪-೨, ೩)

ಚರಾಚರಾತ್ಮಕವಾದ ಈ ಜಗತ್ತು ಸೃಷ್ಟಿಪೂರ್ವದಲ್ಲಿ ಎಲ್ಲಿತ್ತೋ, ಸೃಷ್ಟಿಯ ಕಡೆಯಲ್ಲಿ ಇದು ಮತ್ತೆ ಎಲ್ಲಿ ಅಡಗುತ್ತದೆಯೋ ಅದು ಸ್ಥಲ. ಇದು ಶಿವಶರಣರು ಹೇಳುವ "ಸಹಜ" ಸ್ಥಿತಿ, ಇದನ್ನು ಬಯಲು, ನಿರ್ಬಯಲು, ಶೂನ್ಯ, ನಿಶ್ಶೂನ್ಯ, ಸರ್ವಶೂನ್ಯ ಮುಂತಾಗಿ ಅವರು ಹೇಳುತ್ತಾರೆ. ಬ್ರಹ್ಮದಲ್ಲಿ "ತಾನು ಸೃಜಿಸಬೇಕು" ಎಂಬ ಇಚ್ಛೆ ಉದಿಸುವುದು ಕ್ಷುಭಿತಾವಸ್ಥೆ. (ಕ್ಷುಭಿ ಕಿಂಚಿಚ್ಚಲನೇ) ಎಂದರೆ ಪ್ರಜ್ಞಾಶಕ್ತಿಯ ಸ್ಫುರಣ. ಆಗಲೇ ಅದು ಎರಡಾದದ್ದು. ಒಂದು ಲಿಂಗಸ್ಥಲ; ಮತ್ತೊಂದು ಅಂಗಸ್ಥಲ. ಲಿಂಗಸ್ಥಲವು ಉಪಾಸ್ಯ, ಅಂಗಸ್ಥಲವು ಉಪಾಸಕ. "ಬಹುಸ್ಯಾಂ ಪ್ರಜಾಯೇಯ" "ಸಚ್ಚಾsಸಚ್ಚಾsಭವತ್" ಎಂಬ ಶ್ರುತಿಗಳು ಈ ಸ್ಥಿತಿಯನ್ನು ವರ್ಣಿಸಿವೆ. ಇದು ಸ್ಥಲದ "ಕ್ಷುಭಿತಾವಸ್ಥೆ". ಲಿಂಗಸ್ಥಲ_ಈ ಚರಾಚರಾತ್ಮಕವಾದ ವಿಶ್ವವು ಪ್ರಲಯದಲ್ಲಿ ಎಲ್ಲಿ ಅಡಗಿದ್ದು ಮತ್ತೆ ಸೃಷ್ಟಿಯಲ್ಲಿ ಯಾವುದರ ದೆಶೆಯಿಂದ ಆವಿರ್ಭವಿಸುತ್ತದೆಯೋ ಅದು ಲಿಂಗಸ್ಥಲ. ಅಂಗಸ್ಥಲ-ಅಂ ಎಂದರೆ ಪರಬ್ರಹ್ಮ ; ಆ ಬ್ರಹ್ಮ ಪರವಾಗಿಯೂ, ಬ್ರಹ್ಮಪರಾಯಣವಾಗಿಯೂ ಇರುವುದೇ ಅಂಗಸ್ಥಲವೆನಿಸುತ್ತದೆ.

ಈ ಮೇಲೆ ತಿಳಿಸಿರುವಂತೆ ಲಿಂಗ ಶಬ್ದವಾಚ್ಯನಾದ ಶಿವನಿಗೂ ಮತ್ತು ಅಂಗ ಶಬ್ದವಾಚ್ಯನಾದ ಜೀವಾತ್ಮನಿಗೂ ಮೋಕ್ಷವು ದೊರೆಯುವುದಕ್ಕಿಂತ ಮೊದಲು ಭೇದವು

ಸಂಭವಿಸುತ್ತದೆ. ಮತ್ತು ಅಭೇದವು ಲಿಂಗಾಂಗಸಾಮರಸ್ಯ ರೂಪ ಮೋಕ್ಷವು ದೊರೆತಾಗ ಸಂಭವಿಸುತ್ತದೆ. ಇದನ್ನೇ ಪ್ರವೃತ್ತಿ ಮತ್ತು ನಿವೃತ್ತಿ ಮಾರ್ಗ ಎಂದು ಕರೆಯುತ್ತೇವೆ.

ಈ ಸಿದ್ಧಾಂತದಲ್ಲಿ ಶಿವ-ಶಕ್ತಿಗಳಿಗೆ ಮತ್ತು ಶಿವ-ಜೀವರಿಗೆ ಭೇದಾಭೇದವು ಅಂಗೀಕೃತವಾಗಿದೆ ಎಂಬುದು ಕೂರ್ಮಪುರಾಣದ ಈ ಕೆಳಕಂಡ ಉಕ್ತಿಯಿಂದ ಸ್ಪಷ್ಟವಾಗುತ್ತದೆ.

**ಏಷಾ ಶಕ್ತಿಶ್ಶಿವಹ್ಯೇತಚ್ಛಕ್ತಿಮಾನುಚ್ಯತೇ ಶಿವಃ ।**
**ಶಕ್ತಿ ಶಕ್ತಿಮತೋರ್ಭೇದಂ ವದಂತಿ ಪರಮಾರ್ಥತಃ ॥**
**ಅಭೇದಂ ಚಾನುಪಶ್ಯಂತಿ ಯೋಗಿನಸ್ತತ್ತ್ವ ಚಿಂತಕಾಃ ।**

**(ಶ್ರೀಕರಭಾಷ್ಯಂ, ಸಂ-೨, ಪುಟ-೧೪೬ ರಲ್ಲಿ ಉಲ್ಲಿಖಿತ)**

ಅಲ್ಲದೆ ಶಿವ-ಜೀವರಿಗಿರುವ ಭೇದಾಭೇದವು ಪಾರಮಾರ್ಥಿಕ. ಹೇಗೆಂದರೆ ಬೆಂಕಿಯಿಂದ ಸಿಡಿದ ಕಿಡಿಗಳಿಗೂ ಮತ್ತು ಬೆಂಕಿಗೂ ಕೇವಲ ಭೇದವಾಗಲಿ, ಕೇವಲ ಅಭೇದವಾಗಲಿ ಹೇಳಲಾಗುವುದಿಲ್ಲ. ಅದಕ್ಕೆ ಬದಲಾಗಿ ಭೇದಾಭೇದವನ್ನೇ ಹೇಳಬೇಕು; ಅದರಂತೆ ಶಿವನಿಂದ ಆವಿರ್ಭವಿಸಿದ ಶಿವಾಂಶರೂಪರೂ ಹಾಗೂ ಅಂಗಶಬ್ದವಾಚ್ಯರೂ ಆದ ಜೀವರಿಗೆ ಮತ್ತು ಲಿಂಗಶಬ್ದವಾಚ್ಯನಾದ ಶಿವನಿಗೆ ಕೇವಲ ಭೇದವನ್ನಾಗಲಿ; ಕೇವಲ ಅಭೇದವನ್ನಾಗಲಿ, ಹೇಳಲು ಸಾಧ್ಯವಿಲ್ಲ. **"ಭೇದಾಭೇದ"**ವನ್ನೇ ಹೇಳಬೇಕು. ಅಂಶಿ (ಬೆಂಕಿ) ಮತ್ತು ಅಂಶ (ಕಿಡಿ)ಗಳಿಗೆ ಕೇವಲ ಅಭೇದವನ್ನು ಒಪ್ಪಿದರೆ ಬೆಂಕಿಯಿಂದ ಆಗುವ ಪಾಕಾದಿ ಕ್ರಿಯೆಗಳು ಬೆಂಕಿಯ ಅಂಶವೆನಿಸಿದ ಕಿಡಿಗಳಿಂದಲೂ ಆಗಬೇಕಾಗುತ್ತದೆ.ಇನ್ನು ಅದೇ ಅಂಶಾಶೀಗಳಿಗೆ ಕೇವಲ ಭೇದವನ್ನು ಹೇಳುವುದಾದರೆ ಬೆಂಕಿಗೆ ಅತ್ಯಂತ ಭಿನ್ನವಾದ ಜಲಾದಿಗಳಿಂದಲೂ ದಾಹಾದಿ ಕ್ರಿಯೆಗಳು ಆಗಬೇಕಾಗುತ್ತದೆ. ಅಷ್ಟೇ ಅಲ್ಲದೆ ಜಲದಿಂದ ದಾಹವು ಹುಟ್ಟದಿರುವಂತೆ ಬೆಂಕಿಯ ಕಿಡಿಯಿಂದಲೂ ದಾಹವು ಹುಟ್ಟಬಾರದು ಎಂದಾಗುತ್ತದೆ. ಆದರೆ ಅಗ್ನಿ ಕಣಗಳು ಅರಳೆ ಮುಂತಾದ ರಂಜಕ ದ್ರವ್ಯವನ್ನು ಪ್ರವೇಶಿಸಿ ದಾಹವನ್ನುಂಟು ಮಾಡುತ್ತಿರುವುದು ಎಲ್ಲರಿಗೂ ತಿಳಿದೇ ಇದೆ.

ಇದರಂತೆ ಶಿವಾಂಶನಾದ ಜೀವ ಮತ್ತು ಶಿವನಿಗೆ ಕೇವಲ ಅಭೇದವನ್ನು ಒಪ್ಪಿದರೆ ಶಿವನಲ್ಲಿರುವ ಸರ್ವಜ್ಞತ್ವ ಮುಂತಾದವು ಜೀವಾತ್ಮನಲ್ಲಿಯೂ ಇರಬೇಕಾಗುತ್ತದೆ; ಇನ್ನು ಅವರಿಬ್ಬರಿಗೆ ಕೇವಲ ಭೇದವನ್ನು ಒಪ್ಪಿದರೆ ಶಿವಭಿನ್ನವಾದ ಘಟ-ಪಟಾದಿಗಳಿಂದ ಜ್ಞಾನವು ಉದಿಸದಿರುವಂತೆ ಜೀವನಿಗೂ ಜ್ಞಾನವಿರಬಾರದು ಎಂದಾಗುತ್ತದೆ. ಆದರೆ ಜೀವಾತ್ಮರಿಗೆ ಘಟ-ಪಟಾದಿ ವಸ್ತುಜ್ಞಾನವಿರುವುದು ಸುಪ್ರಸಿದ್ಧ. ಆದ್ದರಿಂದಲೇ ಶ್ರೀಪತಿಪಂಡಿತಭಗವತ್ಪಾದರು "ದ್ವೈತಾದ್ವೈತಾತ್ಮಕವಾದ ವಿಶೇಷಾದ್ವೈತ"ವನ್ನು ಒಪ್ಪಿದ್ದು.

ಶ್ರುತಿಗಳಲ್ಲಿ "ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ । ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋಽಭಿಚಾಕಶೀತಿ ॥" (ಮುಂಡಕ, ೩-೩-೧) ಮುಂತಾದವುಗಳಲ್ಲಿ ಶಿವ-ಜೀವರಿಗೆ ದ್ವೈತವನ್ನು ಹೇಳಿದೆ. ಅದರಂತೆ "ತತ್ತ್ವಮಸಿ" (ಛಾಂದೋಗ್ಯ, ೬-೮-೭) "ಅಹಂ ಬ್ರಹ್ಮಾಸ್ಮಿ" (ಬೃಹದಾರಣ್ಯಕ, ೧-೪-೧೦) ಮುಂತಾದವುಗಳಲ್ಲಿ ಅದ್ವೈತವನ್ನು ಹೇಳಿದೆ. ಈ ಎರಡು ಬಗೆಯ ಶ್ರುತಿಗಳಿಗೂ ಸಮನ್ವಯವನ್ನು ಹೇಳಬೇಕಾದದ್ದು ವೈದಿಕರ ಕರ್ತವ್ಯ. ಅದನ್ನು ಪರಮ ವೈದಿಕರಾದ ವೀರಶೈವಾಚಾರ್ಯರು ಶ್ರದ್ಧೆಯಿಂದ ಅನುಷ್ಠಾನ ಮಾಡಿದ್ದಾರೆ. ಶ್ರೀಪತಿಪಂಡಿತ ಭಗವತ್ಪಾದರು ತಮ್ಮ ಶ್ರೀಕರಭಾಷ್ಯ ಗ್ರಂಥದಲ್ಲಿ,

**ದ್ವೈತಾದ್ವೈತಮತೇ ಶುದ್ಧೇ ವಿಶೇಷಾದ್ವೈತಸಂಜ್ಞಕೇ ।**
**ವೀರಶೈವೈಕಸಿದ್ಧಾಂತೇ ಸರ್ವಶ್ರುತಿಸಮನ್ವಯಃ ॥**

ಎಂದು ವೀರಶೈವಸಿದ್ಧಾಂತದ ವೈಶಿಷ್ಟ್ಯವನ್ನು ಘೋಷಿಸಿದ್ದಾರೆ. ಇದರಿಂದ "ವೀರಶೈವ ಮತವು ಭೇದಾಭೇದಾತ್ಮಕವಾದುದು" ಎಂದು ಸಿದ್ಧವಾಗುವುದು.

**"ಭೋಕ್ತೃ-ಭೋಜ್ಯ-ಪ್ರೇರಕ" :**

ಸತ್ತ್ವರಜಸ್ತಮೋಗುಣಗಳ ವೈಷಮ್ಯ (ತಾರತಮ್ಯ)ದಿಂದ ಶಿವನಲ್ಲಿರುವ ವಿಮರ್ಶಾಶಕ್ತಿಯು ಶುದ್ಧಚಿದ್ರೂಪನಾದ ಪರಶಿವನಲ್ಲಿ ಭೋಕ್ತೃ-ಭೋಜ್ಯ-ಪ್ರೇರಕ ರೂಪವಾಗಿ ಪರಿಣಮಿಸುವುದು. ಈ ವಿಷಯವನ್ನು ಶ್ರೀ ರೇಣುಕಭಗವತ್ಪಾದಾಚಾರ್ಯರು ಅಗಸ್ತ್ಯ ಮಹರ್ಷಿಗಳಿಗೆ ಉಪದೇಶಿಸಿದ್ದು ಈ ವಿಷಯವನ್ನು ಶ್ರೀ ಶಿವಯೋಗಿಶಿವಾಚಾರ್ಯರು ತಮ್ಮಿಂದ ರಚಿತವಾಗಿರುವ ಸಿದ್ಧಾಂತಶಿಖಾಮಣಿಯಲ್ಲಿ "ಪಿಂಡಸ್ಥಲ"ದಲ್ಲಿ ಸವಿವರವಾಗಿ ವಿವರಿಸಿದ್ದು ಅದನ್ನು ಈ ಕೆಳಕಂಡಂತೆ ಸಂಕ್ಷಿಪ್ತವಾಗಿ ನಿರೂಪಿಸಲಾಗಿದೆ.

**ಕಿಂಚಿತ್ಸತ್ತ್ವರಜೋರೂಪಂ ಭೋಕ್ತೃಸಂಜ್ಞಕಮುಚ್ಯತೇ ।**
**ಅತ್ಯಂತ ತಾಮಸೋಪಾಧಿರ್ಭೋಜ್ಯಮಿತ್ಯಭಿಧೀಯತೇ ॥**
**ಪರತತ್ತ್ವಮಯೋಪಾಧಿರ್ಬ್ರಹ್ಮಚೈತನ್ಯಮೀಶ್ವರಃ ।**
**ಭೋಕ್ತಾಭೋಜ್ಯಂ ಪ್ರೇರಯಿತಾ ವಸ್ತುತ್ರಯಮಿದಂ ಸ್ಮೃತಂ॥ (ಸಿದ್ಧಾಂತಶಿಖಾಮಣಿ, ೫-೩೭,೩೮)**

ಕಿಂಚಿತ್ಸತ್ತ್ವರಜೋಗುಣರೂಪವಾದ ಜೀವಚೈತನ್ಯವು "ಭೋಕ್ತೃ" ಎಂದು ಹೇಳಿಸಿಕೊಳ್ಳುವುದು. ಅತ್ಯಂತ ತಾಮಸೋಪಾಧಿ ವಿಶಿಷ್ಟವಾದ ಚೈತನ್ಯವು ರಸಾದಿರೂಪವಾದ "ಭೋಜ್ಯ"ವೆನಿಸಿಕೊಳ್ಳುವುದು. ಪರತತ್ತ್ವರೂಪಶುದ್ಧತತ್ತ್ವ ಗುಣೋಪಾದಿ ವಿಶಿಷ್ಟ ಬ್ರಹ್ಮ ಚೈತನ್ಯವುಳ್ಳ ಮಹೇಶ್ವರನು "ಪ್ರೇರಕನೆನಿಸಿಕೊಳ್ಳುವನು.

ಸಿದ್ಧಾಂತಶಿಖಾಮಣಿಯಲ್ಲಿ ಮುಂದುವರಿದು ಇವುಗಳ ಸ್ವರೂಪವನ್ನು ಈ ಕೆಳಗಿನಂತೆ ನಿರೂಪಿಸಿದೆ–

**ಅತ್ರಪ್ರೇರಯಿತಾ ಶಂಭುಃ ಶುದ್ಧೋಪಾಧಿರ್ಮಹೇಶ್ವರಃ।**

**ಸಮಿಶ್ರೋಪಾಧಯಃ ಸರ್ವೇ ಭೋಕ್ತಾರಃ ಪಶವಃ ಸ್ಮೃತಾಃ ॥**

**ಭೋಜ್ಯಮವ್ಯಕ್ತಮಿತ್ಯುಕ್ತಂ ಶುದ್ಧತಾಮಸರೂಪಕಂ।**

**ಅತ್ಯಂತಗೂಢಚೈತನ್ಯಂ ಜಡಮವ್ಯಕ್ತಮುಚ್ಯತೇ ॥**

**ಸರ್ವಜ್ಞಃ ಪ್ರೇರಕಃ ಶಂಭುಃ ಕಿಂಚಿದ್‌ಜ್ಞೋಜೀವ ಉಚ್ಯತೇ॥** (ಸಿದ್ಧಾಂತಶಿಖಾಮಣಿ, ೫–೩೯,೪೦)

ಇವುಗಳಲ್ಲಿ ಮಹೇಶ್ವರನು ಶುದ್ಧೋಪಾಧಿ ವಿಶಿಷ್ಟನಾಗಿದ್ದು "ಪ್ರೇರಕ"ನೆನಿಸಿಕೊಳ್ಳುವನು. ಸಮಸ್ತ "**ಭೋಕ್ತೃ**"ಗಳು (ಜೀವರು) ಮಿಶ್ರೋಪಾಧಿಗಳಿಂದ ಕೂಡಿದವರಾಗಿದ್ದು "ಪಶು"ಗಳು ಎನಿಸಿಕೊಳ್ಳುವರು. ಭೋಜ್ಯವು ಶುದ್ಧ ತಾಮಸರೂಪವಾಗಿದ್ದು "ಅವ್ಯಕ್ತ"ವೆಂದು ಅರ್ಥಾತ್ ಪ್ರಕೃತಿಯೆಂದು ಕರೆಯಲ್ಪಡುವುದು. ಈ ಅವ್ಯಕ್ತವು (ಮಾಯೆಯು ಅಥವಾ ಪ್ರಕೃತಿಯು) ಜಡವಾಗಿದ್ದು ಅತ್ಯಂತ ಗೂಢ ಚೈತನ್ಯವುಳ್ಳದ್ದಾಗಿರುತ್ತದೆ. ಜಡವಸ್ತುಗಳಾದ ಸಸಿಗಳೂ, ಶಿಲೆಗಳೂ, ಅವ್ಯಕ್ತಚೈತನ್ಯದಿಂದ ಕೂಡಿ ಲೋಕದಲ್ಲಿ ಬೆಳೆಯುತ್ತಿರುವುದು ಸುಪ್ರಸಿದ್ಧವಷ್ಟೇ! ಮಹೇಶ್ವರನು ಸರ್ವಜ್ಞನಾಗಿದ್ದು "ಪ್ರೇರಕ"ನೆನಿಸಿಕೊಳ್ಳುವನು. ಜೀವನ ಕಿಂಚಿದ್‌ಜ್ಞನಾಗಿದ್ದು "**ಭೋಕ್ತೃ**" ಎಂದೆನಿಸಿಕೊಳ್ಳುವನು.

**ಪಾಶ–ಜಗದ್ರೂಪಬಂಧ :**

ಮಲವನ್ನು ಪಾಶವೆಂಬ ಪರ್ಯಾಯ ಹೆಸರಿನಿಂದ ಕರೆಯುತ್ತೇವೆ. ಇದರಿಂದ ಆವೃತವಾದ ಜೀವನು ತಾನು ಶಿವನಿಗಿಂತ ಭಿನ್ನನೆಂದು ತಿಳಿದು ಕಿಂಚಿದ್‌ಜ್ಞನಾಗುತ್ತಾನೆ ಮತ್ತು ಆಣವ–ಮಾಯೇಯ–ಕಾರ್ಮಿಕ–ಮಲಗಳಿಂದ ಆವೃತನಾಗಿ ಜನನ–ಮರಣಗಳ ಸಂಕೋಲೆಗೆ ಸಿಲುಕಿ ಸಂಸಾರವೆಂಬ ಚಕ್ರದಲ್ಲಿ ನಿರಂತರವಾಗಿ ಸುತ್ತುತ್ತಿರುತ್ತಾನೆ. ಇಂತಹವನಿಗೆ ಗುರುವಿನ ಅನುಗ್ರಹ ದೊರೆತು ಗುರುವು ಇವನನ್ನು ಶಕ್ತಿಪಾತಕ್ಕೆ ಗುರಿಪಡಿಸಿ ದೀಕ್ಷೆಯನ್ನು ನೀಡುತ್ತಾನೆ.

"ಶಿವಭಕ್ತನಿಗೆ ಗುರುವಿನ ಕೃಪೆಯಿಂದ ದೊರೆತ ಮೂರು ವಿಧದ ದೀಕ್ಷೆಗಳಾದ ವೇದ–ಮಂತ್ರ–ಕ್ರಿಯಾ ದೀಕ್ಷೆಗಳ ಫಲವಾಗಿ ಮೂರು ವಿಧದ ಮಲಗಳಾದ ಆಣವ, ಮಾಯೇಯ ಮತ್ತು ಕಾರ್ಮಿಕ ಮಲಗಳು ನಾಶವಾಗುತ್ತವೆ. ಜೀವನು ಜನನ–ಮರಣಗಳ ಸಂಕೋಲೆಯಿಂದ ಬಿಡುಗಡೆಯನ್ನು ಹೊಂದುತ್ತಾನೆ ಮತ್ತು ಜೀವನು ಪರಶಿವಬ್ರಹ್ಮದಲ್ಲಿ ಸಾಮರಸ್ಯವನ್ನು ಹೊಂದುತ್ತಾನೆ. ಗರುವಿನ ಮೂಲಕ ಇಷ್ಟಲಿಂಗ ಧಾರಣೆಯಾಗುವುದರಿಂದ ಜೀವಿಯು ಪತಿಕರ್ಮವನ್ನು ಆಚರಣೆ ಮಾಡುತ್ತಾನೆ. ಇದರ

ಫಲವಾಗಿ ಚಿತ್ತ (ಪ್ರಕೃತಿ ವಿಶೇಷ)ವು ಪರಿಶುದ್ಧವಾಗುವುದರಿಂದ ಶಿವತ್ತ್ವ ಪ್ರಾಪ್ತಿಯಾಗುತ್ತದೆ ಮತ್ತು ಲಿಂಗಾಂಗ-ಸಾಮರಸ್ಯಾತ್ಮಕ ರೂಪ ಪುನರ್ಜನ್ಮವಿಲ್ಲದ ಮೋಕ್ಷವು ಜೀವಿಗೆ ದೊರೆಯುತ್ತದೆ."

**ಮಲ ಸ್ವರೂಪ :**

ಜೀವನು ಶಿವನ ಅಂಶ ಎಂದು ಈ ಮೊದಲೇ ತಿಳಿಸಲಾಗಿದೆ. ಅಂದ ಮೇಲೆ ಶಿವನಲ್ಲಿ ಪರಿಪೂರ್ಣತ್ವ, ಸರ್ವಜ್ಞತ್ವ ಮತ್ತು ಸರ್ವಕರ್ತೃತ್ವ ರೂಪ ಗುಣಗಳಿದ್ದವು, ಜೀವನು ಮೂಲತಃ ಶಿವನೇ ಆದರೂ ಅವನು ಅನಾದಿಕರ್ಮವಶದಿಂದ ಬೆಂಕಿಯಿಂದ ಕಿಡಿಗಳು ಸಿಡಿದಂತೆ ಶಿವಾಂಶವಾಗಿ ಬೇರ್ಪಟ್ಟನು. ಆಗ ಶಿವನಲ್ಲಿದ್ದ ಪರಿಪೂರ್ಣತ್ವವು ಮರೆಯಾಗಿ "ತಾನು ಅಪೂರ್ಣ" ಎಂಬ ಭಾವ ಆತನಲ್ಲಿ ಮೂಡಿತು. ಇದೇ **"ಆಣವಮಲ"**. ಇದೇ ಇಚ್ಛಾಶಕ್ತಿಯ ಸಂಕೋಚ. ತಾನು ಮೊದಲು ಸರ್ವಜ್ಞನಾದರೂ ಈಗ ಅವನು ಕಿಂಚಿದ್‌ಜ್ಞನೆನಿಸಿದ. ಇದೇ **"ಮಾಯಾಮಲ"**. ಇದೇ ಜ್ಞಾನಶಕ್ತಿಯ ಸಂಕೋಚ. ಶಿವನಲ್ಲಿದ್ದ ಸರ್ವಕರ್ತೃತ್ವಶಕ್ತಿಯು ಮರೆಯಾಗಿ, ತಾನು ಕಿಂಚಿತ್ಕರ್ತೃ ಎಂಬ ತಿಳಿವು (ಭಾವನೆ) ಉದಿಸಿತು. ಇದೆ **"ಕಾರ್ಮಮಲ"**. ಇದು ಕ್ರಿಯಾಶಕ್ತಿಯ ಸಂಕೋಚ. ಈ ಬಗೆಯ ಮೂರು ಮಲಗಳಿಂದ ಆವೃತನಾದ ಜೀವನು ಸಂಸಾರಿಯೆನಿಸಿ, ಜನನ, ಮರಣಗಳ ಸುಳಿಯಲ್ಲಿ ಬಿದ್ದು ಪರಿಭ್ರಮಿಸತೊಡಗಿದ. ಶಿವದೀಕ್ಷೆ ಈ ಮಲಗಳನ್ನು ತೊಡೆಯುತ್ತದೆ.

**ದೀಕ್ಷಾಸ್ವರೂಪ :**

ಶ್ರೀ ಶಿವಯೋಗಿಶಿವಾಚಾರ್ಯರು ತಾವು ರಚಿಸಿರುವ ಸಿದ್ಧಾಂತಶಿಖಾಮಣಿ ಗ್ರಂಥದಲ್ಲಿ ಕೆಳಗಿನ ಶ್ಲೋಕದಲ್ಲಿ ದೀಕ್ಷಾಸ್ವರೂಪವನ್ನು ನಿರೂಪಿಸಿದ್ದಾರೆ.

**ಸಾ ದೀಕ್ಷಾ ತ್ರಿವಿಧಾ ಪ್ರೋಕ್ತಾ ಶಿವಾಗಮ ವಿಶಾರದೈಃ ।**
**ವೇಧಾರೂಪಾಕ್ರಿಯಾರೂಪಾಮಂತ್ರರೂಪಾ ಚ ತಾಮಸ ॥ ಸಿದ್ಧಾಂತಶಿಖಾಮಣಿ, ೬-೧೨)**

ದೀಕ್ಷೆ ಮೂರು ವಿಧ. ವೇಧಾ, ಮಂತ್ರ ಮತ್ತು ಕ್ರಿಯಾ ಎಂದು. ಗುರುವು ಶಿಷ್ಯನನ್ನು ಹತ್ತಿರ ಕರೆದು ಅವನನ್ನು ಕೃಪಾದೃಷ್ಟಿಯಿಂದ ನೋಡಿ, ಅವನ ಮಸ್ತಕದ ಮೇಲೆ ತನ್ನ ವರದಹಸ್ತವನ್ನಿಡುವುದೇ **"ವೇಧಾದೀಕ್ಷೆ"**. ಇದರಿಂದ ಜೀವನ ಆಣವಮಲವು ನಷ್ಟವಾಗುತ್ತದೆ. ತರುವಾಯ ಶಿವದೀಕ್ಷಾಂಗವಾಗಿ ಎಸಗುವ **"ಮಂತ್ರದೀಕ್ಷೆ"** ಶ್ರೀಪಂಚಾಕ್ಷರೀ ಮಹಾಮಂತ್ರ ಬೋಧನೆಯಿಂದ ಅವನಲ್ಲಿದ್ದ ಮಾಯಾಮಲವು ಅಳಿಯುತ್ತದೆ. ಕುಂಡ-ಮಂಡಲ-ಕಲಶಸ್ಥಾಪನಾದಿ **"ಕ್ರಿಯಾದೀಕ್ಷೆ"**ಯಿಂದ ಕಾರ್ಮಮಲವು ಅಳಿದು, ಅವನು (ಜೀವನು) ಪರಿಶುದ್ಧನಾದ ಅಪರಂಜಿಯಂತೆ ಬೆಳಗಿ, ಅಮಲ (ಮಲರಹಿತ) ಶಿವಭಕ್ತನೆನಿಸುತ್ತಾನೆ.

**ಮೋಕ್ಷ :**

ಜೀವಿಯು ಮೋಕ್ಷವನ್ನು ಪಡೆಯಲು ಬಂಧಗಳಿಂದ ಬಿಡುಗಡೆ ಹೊಂದಬೇಕು. ಅಂದರೆ ಅವನಿಗೆ ಗುರುವಿನ ಕೃಪೆಯು ದೊರೆಯಬೇಕು. ಶಿವಭಕ್ತನಿಗೆ ಗುರುಕೃಪೆಯು ದೊರೆಯುವುದರಿಂದ ಅದರ ಪರಿಣಾಮವಾಗಿ ಶಿವನ ಕೃಪೆಯು ಗುರುವು ನೀಡುವ (ಕೊಡುವ) ದೀಕ್ಷೆಯ ಮೂಲಕವಾಗಿ ಜೀವಿಗೆ ಉಂಟಾಗುತ್ತದೆ. ಇದರ ಪರಿಣಾಮವಾಗಿ ಜೀವಿಯು ಜನನ-ಮರಣಗಳ ಸಂಕೋಲೆಯಿಂದ ಬಿಡುಗಡೆ ಹೊಂದಿ ಪುನರ್ಜನ್ಮ ರಹಿತವಾದ ಲಿಂಗಾಂಗಸಾಮರಸ್ಯರೂಪ ಮೋಕ್ಷವನ್ನು ಪಡೆಯುತ್ತಾನೆ.

ಶಿವದೀಕ್ಷೆಯಿಂದ ಪಾಶಮುಕ್ತನಾದ ಜೀವನನ್ನು ಉದ್ಧರಿಸುವುದಕ್ಕಾಗಿಯೇ ಭಕ್ತಿಯು ಅವನನ್ನು ಆಶ್ರಯಿಸಿತು. ಈ ಭಕ್ತಿಯು **ಶ್ರದ್ಧಾ-ನಿಷ್ಠಾ-ಅವಧಾನ-ಅನುಭವ-ಆನಂದ ಮತ್ತು ಸಮರಸ** ಎಂಬ ಆರು ಹಂತಗಳಲ್ಲಿ ಭಕ್ತನನ್ನು ಮೇಲೆ ಮೇಲೆ ಕೊಂಡೊಯ್ದು ಅವನನ್ನು ಶಿವನಲ್ಲಿ ಸಮರಸಗೊಳಿಸುತ್ತದೆ.

**ಶಕ್ತಿಪಾತ :**

ಶ್ರೀಗುರುವು ಭಕ್ತನಿಗೆ ಶಕ್ತಿಪಾತವು ಉಂಟಾಗಿರುವುದನ್ನು ಗಮನಿಸಿದ ನಂತರ ಭಕ್ತಿಯು ಉಂಟಾಗಿರುವ ಭಕ್ತನಿಗೆ ಶಿವಜ್ಞಾನವನ್ನು ಉಂಟುಮಾಡಿ ಪರಮಸಾಕ್ಷಾತ್ಕಾರ ರೂಪ ಲಿಂಗಾಂಗಸಾಮರಸ್ಯ ಉಂಟಾಗಲು ಅತ್ಯಗತ್ಯವಾದ "ದೀಕ್ಷೆ"ಯನ್ನು ಶ್ರೀಗುರುವು ನೀಡುವನು. ಶಿವಗೀತೆಯು ಶಕ್ತಿಪಾತಲಕ್ಷಣವನ್ನು ಈ ಮುಂದಿನಂತೆ ತಿಳಿಸುತ್ತದೆ.

**ಲಕ್ಷಣಂ ಶಕ್ತಿಪಾತಸ್ಯ ಪ್ರಬೋಧಾನಂದಸಂಭವಃ ।**
**ಸ ಯಸ್ಮಾತ್ ಪರಮಾ ಶಕ್ತಿಃ ಪ್ರಬೋಧಾನಂದರೂಪಿಣೀ ॥**
**ಆನಂದಭೋಧಯೋರ್ಲಿಂಗಮಂತಃ ಕರಣವಿಕ್ರಿಯಾ ।**
**ಯಥಾ ಸ್ಯಾತ್ ಕಂಪರೋಮಾಂಚಸ್ಮರನೇತ್ರಾಂಗವಿಕ್ರಿಯಾ ॥** (ಶಿವಗೀತೆ)

(ಶ್ರೀಕರಭಾಷ್ಯ, ಸಂ-೨, ಪುಟ-೩೩ ರಲ್ಲಿ ಉಲ್ಲೇಖಿತ)

ಪ್ರಬೋಧಾನಂದದಿಂದ ಉದಿಸುವ ಸ್ಫೂರ್ತಿಯೇ ಶಕ್ತಿ. ಅದೇ ಪರಮಶಕ್ತಿ. ಅದು ಪ್ರಬೋಧಾನಂದ ರೂಪವಾದದ್ದು. ಆನಂದ ಮತ್ತು ಬೋಧಜ್ಞಾನವಾದ ಮೇಲೆ ಅವನ ಅಂತಃಕರಣದಲ್ಲಿ ಕೆಲವು ವಿಕಾರಗಳು ಉಂಟಾಗುತ್ತವೆ. ಭಕ್ತಿಯ ಉದ್ರೇಕಸ್ಥಿತಿಯಲ್ಲಿ ಕಂಪ (ಮೈನಡುಕ), ರೋಮಾಂಚ (ನೀಂಗೂದಲು) ನೇತ್ರಪ್ರಾಂತಗಳಲ್ಲಿ ಆನಂದಬಾಷ್ಪಗಳು ಸ್ಫುರಿಸುವುದು ಮುಂತಾದ ಅನುಭವಗಳು ತಲೆದೋರು (ಕಂಡುಬರು)ತ್ತವೆ.

ಶಕ್ತಿಪಾತ ಲಕ್ಷಣವನ್ನು ಪಾರಮೇಶ್ವರ, ಮೃಗೇಂದ್ರಾಗಮದಲ್ಲಿ ಈ ಕೆಳಗಿನಂತೆ

ನಿರೂಪಿಸಲಾಗಿದ್ದು– ಈ ವಿಷಯವು ಸಿದ್ಧಾಂತಶಿಖಾಮಣಿಯಲ್ಲಿ ಗುರುಕಾರುಣ್ಯಸ್ಥಳದಲ್ಲಿ ಉಲ್ಲೇಖಿಸಿ ವಿವರಿಸ್ಪಟ್ಟಿದೆ.

**ಶಕ್ತಿಪಾತಂ ಸಮಾಲೋಕ್ಯ ದೀಕ್ಷಯಾ ಯೋಜಯೇದಮುಂ। (ಸಿದ್ಧಾಂತಶಿಖಾಮಣಿ, ೬–೧೦)**

**ಯೇಷಾಂ ಶರೀರಿಣಾಂ ಶಕ್ತಿಃ ಪತತ್ಯೇವ ನಿವೃತ್ತಯೇ।**

**ತೇಷಾಂ ತಲ್ಲಿಂಗಮೌತ್ಸುಕ್ಯಂ ಮುಕ್ತೌ ದ್ವೇಷೋ ಭವಸ್ಥಿತೌ॥**

**ಭಕ್ತಿಶ್ಚ ಶಿವಭಕ್ತೇಷು ಶ್ರದ್ಧಾ ತಚ್ಛಾಸಕೇ ಶಿವೇ (ವಿಧೌ)**

**(ಸಿದ್ಧಾಂತಶಿಖಾಮಣಿ, ೬೬ನೇ ಪುಟದಲ್ಲಿ ಉಲ್ಲೇಖಿತ)**

**ಏಭಿರ್ಲಕ್ಷೈರವಿಚ್ಛಿನ್ನೈಃ ಶಕ್ತಿಪಾತೋ ಮಹಾತ್ಮಭಿಃ॥**

**ಅನುಮೇಯಃ ಸ ದೀಕ್ಷೈಶ್ಚ ಶಕ್ತಿಪಾತಾನುಸಾರತಃ। (ಪಾರಮೇಶ್ವರ, ಮೃಗೇಂದ್ರಾಗಮ)**

ಸಂಸಾರಹೇಯ ಭಾವನೆಯಿಂದ ಆತ್ಮನ ಮೇಲೆ ತೀಕ್ಷ್ಣವಾದ ಶಿವಕೃಪಾರೂಪ 'ಶಕ್ತಿಪಾತ'ವಾಗುತ್ತದೆ; ಎಂದರೆ ಯಾರ ಮೇಲೆ ಶಿವಕೃಪೆಯಾಗುತ್ತದೆಯೋ ಅವನಲ್ಲಿ ಮುಕ್ತಿಯಲ್ಲಿ ಔತ್ಸುಕ್ಯ, ಭವಸ್ಥಿತಿಯಲ್ಲಿ ದ್ವೇಷ, ಶಿವಭಕ್ತರಲ್ಲಿ, ಶಿವಶಾಸ್ತ್ರಗಳಲ್ಲಿ ಭಕ್ತಿ, ಶ್ರದ್ಧೆಗಳು ಮೂಡುತ್ತವೆ. ಇದೇ ಶಕ್ತಿಪಾತ. ಅವಿಚ್ಛಿನ್ನವಾದ ಈ ಲಕ್ಷಣಗಳನ್ನು ಗುರುತಿಸಿದ ಗುರುವು ಅವನಿಗೆ **"ಶಿವದೀಕ್ಷೆ"** ಮಾಡುತ್ತಾನೆ. ಈ ಮೂಲಕವಾಗಿ ಶಿಷ್ಯನಿಗೆ ಗುರುವಿನ ಮೂಲಕವಾಗಿ ಶಿವನ ಮೇಲೆ ಭಕ್ತಿಯು ಉಂಟಾಗಿ ಶಿವಜ್ಞಾನ ದೊರೆತು ಲಿಂಗಾಂಗಸಾಮರಸ್ಯರೂಪ ಪರಮಸಾಕ್ಷಾತ್ಕಾರ ದೊರೆಯುತ್ತದೆ.

**ಗುರುಸ್ವರೂಪ :**

ದೀಕ್ಷೆಯನ್ನು ಶ್ರೀ ಗುರುವು ಭಕ್ತನಿಗೆ ಅನುಗ್ರಹಿಸುವನು. ಅಂತಹ ಗುರುವು ಮೊದಲೇ ತಿಳಿಸಿರುವಂತೆ ಶಿಷ್ಯನ ಶಕ್ತಿಪಾತವನ್ನು ಗುರುತಿಸಿದ ನಂತರ ದೀಕ್ಷೆಯನ್ನು ನೀಡುವನು.

ಸಿದ್ಧಾಂತಶಿಖಾಮಣಿಯಲ್ಲಿ ದೀಕ್ಷಾಗುರುಸ್ಥಲದಲ್ಲಿ ಕೆಳಗಿನ ಶ್ಲೋಕಗಳಲ್ಲಿ ಗುರುವಿನ ಸ್ವರೂಪವನ್ನು ನಿರೂಸಿಲಾಗಿದೆ.–

**ದೀಯತೇ ಪರಮಂ ಜ್ಞಾನಂ ಕ್ಷೀಯತೇ ಪಾಶಬಂಧನಂ।**

**ಯಯಾ ದೀಕ್ಷೇತಿ ಸಾ ತಸ್ಯಾಂ ಗುರುರ್ದೀಕ್ಷಾ ಗುರುಃ ಸ್ಮೃತಃ।**

**ಗುಣಾತೀತಂ ಗುವರ್ಣಂ ಚ ರೂಪಾತೀತಂ ರುವರ್ಣಕಂ।**

**ಗುಣಾತೀತಮರೂಪಂ ಚ ಯೋ ದದ್ಯಾತ್ ಸ ಗುರುಃ ಸ್ಮೃತಃ॥**

(ಸಿದ್ಧಾಂತಶಿಖಾಮಣಿ, ೧೫–೭, ೮)

ಶ್ರೇಷ್ಠವಾದ ಶಿವಜ್ಞಾನವು ಯಾವುದರಿಂದ ಅನುಗ್ರಹಿಸಲ್ಪಡುವುದೋ, ಯಾವುದರಿಂದ ಮಲಮಾಯಾದಿ ಪಾಶಬಂಧವು ನಾಶಮಾಡಲ್ಪಡುವುದೋ, ಅದು ದೀಕ್ಷೆಯೆನಿಸಿಕೊಳ್ಳುವುದು. ಅಂತಹ ಚಿತ್ಕಲಾರೂಪಾದೀಕ್ಷೆಯನ್ನು ನೀಡುವವನನ್ನು ದೀಕ್ಷಾಗುರು ಎಂದು ಕರೆಯುವರು. ಇಂತಹ ದೀಕ್ಷೆಯಿಂದ ಶ್ರೇಷ್ಠವಾದ ಶಿವಜ್ಞಾನವು ಅನುಗ್ರಹಿಸಲ್ಪಡುತ್ತದೆ. ಮಲಮಾಯಾದಿ ಪಾಶಬಂಧವು ನಾಶವಾಗುತ್ತದೆ. ಈ ರೀತಿಯಾದ ಚಿತ್‌ಕ್ರಿಯಾಸ್ವರೂಪ ದೀಕ್ಷೆಯನ್ನು ಗುರುವು ಶಿಷ್ಯನಿಗೆ ಅನುಗ್ರಹಿಸುತ್ತಾನೆ. 'ಗುರು' ಎಂಬೀ ಶಬ್ದದಲ್ಲಿರುವ 'ಗು' ಎಂಬ ಅಕ್ಷರವು ಪ್ರಾಕೃತಗುಣರಾಹಿತ್ಯವನ್ನು ಬೋಧಿಸುವುದು. 'ರು' ಎಂಬ ಅಕ್ಷರವು ಪ್ರಾಕೃತರೂಪರಾಹಿತ್ಯವನ್ನು ಬೋಧಿಸುವುದು. ಇಂತಹ ಪ್ರಾಕೃತಗುಣಾ-ರೂಪಾತೀತವೂ ಆದ ಪರಶಿವಬ್ರಹ್ಮದ ಸ್ವರೂಪವನ್ನು ಅನುಗ್ರಹಿಸುವ ಸಾಮರ್ಥ್ಯವುಳ್ಳವನೇ ಗುರುವೆಂದು ಹೇಳಿಸಿಕೊಳ್ಳುವನು.

ಸಿದ್ಧಾಂತಶಿಖಾಮಣಿಯಲ್ಲಿ ಮುಂದುವರಿದು ದೀಕ್ಷಾಸ್ವರೂಪವನ್ನು ಈ ಕೆಳಗಿನಂತೆ ನಿರೂಪಿಸಲಾಗಿದೆ-

**ದೀಯತೇ ಚ ಶಿವಜ್ಞಾನಂ ಕ್ಷೀಯತೇ ಪಾಶಬಂಧನಂ ।**
**ಯಸ್ಮಾದತಃ ಸಮಾಖ್ಯಾತಾ ದೀಕ್ಷೇತೀಯಂ ವಿಚಕ್ಷಣೈಃ ॥ (ಸಿದ್ಧಾಂತಶಿಖಾಮಣಿ, ೬-೧೧)**

ಪಾಶಬಂಧವನ್ನು ಕತ್ತರಿಸಿ ಶಿವಜ್ಞಾನವನ್ನು ದಯಪಾಲಿಸುವುದೇ ದೀಕ್ಷೆ. ಇದು ವೇಧಾ, ಮನು ಮತ್ತು ಕ್ರಿಯಾ ಎಂದು ಮೂರು ಬಗೆ. "ಶ್ರೀ ಗುರುವು ಕೃಪಾದೃಷ್ಟಿಯಿಂದ ನೋಡಿ ಶಿಷ್ಯನ ಮಸ್ತಕದ ಮೇಲೆ ತನ್ನ ಹಸ್ತಕಮಲವನ್ನಿರಿಸುವುದೇ "ವೇಧಾದೀಕ್ಷೆ". ಇದರಿಂದ ಶಿಷ್ಯನ ಆಣವಮಲವು ಅಳಿಯುತ್ತದೆ. ತರುವಾಯ ಗುರುವು ಷಡಧ್ವ ವರ್ಣ, ಪದ, ಭುವನ, ಮಂತ್ರ, ಕಲಾ ಮತ್ತು ತತ್ತ್ವ) ಕ್ರಮದಂತೆ ಲಿಂಗಾಂಗಗಳನ್ನು ಶುದ್ಧಗೊಳಿಸಿ, ತನ್ನ ಯೋಗದೃಷ್ಟಿಯಿಂದ ಶಿಷ್ಯನ ಹೃದಯಕಮಲದಲ್ಲಿರುವ ಪ್ರಾಣಲಿಂಗ ಕಲೆಯನ್ನು ಆಕರ್ಷಿಸಿ, ವಿಧ್ಯುಕ್ತವಾಗಿ ಸಂಸ್ಕರಿಸಿದ ಲಿಂಗದಲ್ಲಿ ತುಂಬಿ, ಅದನ್ನ ಶಿಷ್ಯನಿಗೆ ಧಾರಣ ಮಾಡಿ, ಪಂಚಾಕ್ಷರೀ ಮಹಾಮಂತ್ರವನ್ನು ಉಪದೇಶಿಸುವುದು "ಮಂತ್ರದೀಕ್ಷೆ". ಇದು ಮಾಯಾಮಲವನ್ನು ಕಳೆಯುತ್ತದೆ. ದೀಕ್ಷಾಂಗವಾಗಿ ಎಸಗುವ ಮಂಡಲ-ಕಲಶಸ್ಥಾಪನಾದಿಗಳೇ "ಕ್ರಿಯಾದೀಕ್ಷೆ." ಇದು ಕಾರ್ಮಮಲವನ್ನು ಕಳೆಯುತ್ತದೆ. ಕ್ರಿಯಾಸಿದ್ಧನಾದ ಗುರುವು ಶಿಷ್ಯನ ಸ್ಥೂಲಶರೀರ (ತ್ಯಾಗಾಂಗ)ದಲ್ಲಿ ಇಷ್ಟಲಿಂಗವನ್ನು ಧಾರಣ ಮಾಡುವುದರ ಜೊತೆಗೆ ಅವನ ಸೂಕ್ಷ್ಮಶರೀರ (ಭೋಗಾಂಗ)ದಲ್ಲಿ ಪ್ರಾಣಲಿಂಗವನ್ನೂ, ಕಾರಣಶರೀರ (ಯೋಗಾಂಗ)ದಲ್ಲಿ ಭಾವಲಿಂಗವನ್ನೂ ಧರಿಸುವುದಲ್ಲದೆ, ಶಿಷ್ಯನ ಪಂಚಜ್ಞಾನೇಂದ್ರಿಯ (ಶ್ರೋತ್ರ, ತ್ವಕ್, ನೇತ್ರ, ಜಿಹ್ವಾ, ಘ್ರಾಣ) ಮತ್ತು ಪಂಚಕರ್ಮೇಂದ್ರಿಯ (ವಾಕ್. ಪಾಣಿ, ಪಾದ, ಪಾಯು, ಉಪಸ್ಥ)ಗಳಲ್ಲಿ

ಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗಗಳನ್ನೂ, ಮನಸ್ಸಿನಲ್ಲಿ ಮಹಾಲಿಂಗವನ್ನೂ ಧಾರಣಮಾಡುತ್ತಾನೆ. ಇದರಿಂದ ಜೀವನು ಸರ್ವಾಂಗಲಿಂಗಯೆನಿಸುವನು."

**ಲಿಂಗಾಂಗಸ್ಥಲವಿವೇಕ :**

ಶಿವದೀಕ್ಷೆಯ ತರುವಾಯ ಹಿಂದೆ ತಿಳಿಸಿರುವಂತೆ ಚಿತ್ತಶಕ್ತಿವಿಶಿಷ್ಟ ಜೀವನು ಅಂಗನೆನಿಸಿದನು. ಚಿಚ್ಛಕ್ತಿವಿಶಿಷ್ಟ ಶಿವನು ಲಿಂಗರೂಪದಿಂದ ಗುರುವು ನೀಡುವ ಶಿವದೀಕ್ಷೆಯಿಂದ ಅಂಗ (ಜೀವ)ವನ್ನು ಸೇರಿ ಲಿಂಗವೆನಿಸಿದನು. ಈ ಲಿಂಗವು ಭಕ್ತನನ್ನು ಅನುಗ್ರಹಿಸುವುದಕ್ಕಾಗಿ ಏರ್ಪಟ್ಟುದು. ದೀಕ್ಷೆಯಲ್ಲಿ ಗುರುವು ಭಕ್ತನ ಸ್ಥೂಲ (ತ್ಯಾಗಾಂಗ), ಸೂಕ್ಷ್ಮ (ಭೋಗಾಂಗ), ಮತ್ತು ಕಾರಣ (ಯೋಗಾಂಗ) ಶರೀರಗಳಲ್ಲಿ ಕ್ರಮವಾಗಿ ಇಷ್ಟ-ಪ್ರಾಣ-ಭಾವ ಲಿಂಗಗಳನ್ನು ಧಾರಣ ಮಾಡಿರುತ್ತಾನೆ. ಅವುಗಳಲ್ಲಿ ಇಷ್ಟಲಿಂಗವು ಆಚಾರಲಿಂಗ-ಗುರುಲಿಂಗವೆಂದೂ, ಪ್ರಾಣಲಿಂಗವು ಶಿವಲಿಂಗ-ಚರಲಿಂಗವೆಂದೂ, ಭಾವಲಿಂಗವು ಪ್ರಸಾದಲಿಂಗ-ಮಹಾಲಿಂಗವೆಂದೂ ಮತ್ತೆ ಎರಡೆರಡು ತೆರನಾಗಿ ವಿಭಾಗ ಹೊಂದಿ ಆರು ಬಗೆಯಾಗುತ್ತದೆ. ಅದರಂತೆ ತ್ಯಾಗಾಂಗವು ಕೂಡ ಭಕ್ತ-ಮಾಹೇಶ ಎಂದೂ, ಭೋಗಾಂಗವು ಪ್ರಸಾದಿ-ಪ್ರಾಣಲಿಂಗಿಯೆಂದೂ, ಯೋಗಾಂಗವು ಶರಣ-ಐಕ್ಯವೆಂದೂ ವಿಭಾಗಿಸಲ್ಪಟ್ಟು ಆರು ಬಗೆಯಾಗಿರುತ್ತದೆ.

ಪರಶಿವಬ್ರಹ್ಮಸ್ವರೂಪವಾದ ಲಿಂಗವು ಈ ಜಗತ್ತನ್ನು ಆವರಿಸಿರುವುದು. ಈ ಕೆಳಗಿನ ಈಶಾವಾಸ್ಯೋಪನಿಷತ್ ಶಾಂತಿಮಂತ್ರವು ಈ ವಿಷಯವನ್ನು ಪ್ರತಿಪಾದಿಸಿ ನಿರೂಪಿಸಿದೆ-

**ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ।**
**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥**
**ಓಂ ಶಾಂತಿಃ ಶಾಂತಿಃ ಶಾಂತಿಃ**

ತತ್ಪದಾರ್ಥವೆನಿಸಿರುವ ಲಿಂಗವು ಎಲ್ಲೆಡೆಯೂ ತುಂಬಿದೆ. ತ್ವಂಪದಾರ್ಥವಾದ ಲಿಂಗ ತನ್ನಲ್ಲಿರುವ ಶಕ್ತಿಯು ವಿಕಾಸವಾದಾಗ ಅದು ಎಲ್ಲೆಡೆಯೂ ತುಂಬುವುದು. ಸರ್ವಜ್ಞತ್ವ ಸರ್ವಕರ್ತೃತ್ವವುಳ್ಳ ಪರಶಿವ ಬ್ರಹ್ಮತತ್ತ್ವಕ್ಕಿಂತಲೂ ಚೈತನ್ಯಪರಿಪೂರ್ಣವಾದ ಲಿಂಗಸ್ಥಲವು ಬೇರೆಯಾಗುತ್ತದೆ. ಆದ್ದರಿಂದ ಕಿಂಚಿದ್‌ಜ್ಞತ್ವ, ಕಿಂಚಿತ್‌ಕರ್ತೃತ್ವವುಳ್ಳ ಅಂಗನು ಷಟ್‌ಸ್ಥಲ ಮಾರ್ಗದಿಂದ ಪರಶಿವಲಿಂಗದ ಪರಿಪೂರ್ಣ ಸ್ವರೂಪವನ್ನು ಗಳಿಸಿ ಸರ್ವವ್ಯಾಪಕ ಪರಶಿವ ಸ್ವರೂಪವಾಗಿಯೇ ಉಳಿಯುವನು.

ಅಂಗನೆನಿಸಿದ ಜೀವನು ವಸ್ತುತಃ ಶಿವಾಂಶವೇ. ಆದರೆ ಅನಾದಿ ಕರ್ಮವಶದಿಂದ

ಅವನು ಸರ್ವಜ್ಞತ್ವ ಮುಂತಾದ ಷಡಂಗಪರಿಪೂರ್ಣಬ್ರಹ್ಮದಿಂದ ಈಗ ಬೇರೆಯಾಗಿದ್ದಾನೆ. ಇಂಥ ಅಂಗನು ಗುರುಮುಖದಿಂದ ಶಿವದೀಕ್ಷೆ ಪಡೆದು ಷಟ್‌ಸ್ಥಲದ ಹಾದಿ ಹಿಡಿದು ಭಕ್ತ-ಮಾಹೇಶ ಮುಂತಾದ ಆರು ಸ್ಥಳಗಳಲ್ಲಿ ಮುನ್ನಡೆದು ತನ್ನ ಜೀವ ಗುಣಗಳನ್ನು ಕಳೆದುಕೊಂಡು ಶಿವಗುಣಗಳನ್ನು ಪಡೆದು **"ನೀರಿನಲ್ಲಿ ನೀರು, ಬೆಂಕಿಯಲ್ಲಿ ಬೆಂಕಿ ಬೆರೆವಂತೆ"** ಶಿವನಲ್ಲಿ ಐಕ್ಯನಾಗಿ ನಿತ್ಯಸುಖ ಪಡೆಯುವನು.

ಇಲ್ಲಿ **'ಶಾಂತಿಃ ಶಾಂತಿಃ ಶಾಂತಿಃ'** ಎಂದು ಮೂರು ಸಲ ಹೇಳಿರುವುದು ಆಣವ, ಮಾಯೀಯಾ ಮತ್ತು ಕಾರ್ಮಿಕ ಎಂಬ ಮೂರು ಮಲಗಳ ಅಥವಾ ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕ ಎಂಬ ಮೂರು ತಾಪತ್ರಯಗಳ ಉಪಶಮನಕ್ಕಾಗಿ ಮೂರು ವಿಧದ ಮಲಗಳ ಮತ್ತು ತಾಪತ್ರಯಗಳ ನಿವಾರಣೆಗಾಗಿ ಎಂದು ಭಾವಿಸಬೇಕಾಗಿದೆ.

**ಪರಮಪುರುಷಾರ್ಥರೂಪವಾದ ಲಿಂಗಾಂಗಸಾಮರಸ್ಯರೂಪ ಮೋಕ್ಷಸ್ವರೂಪ:**

ಹಂತಹಂತವಾಗಿ ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ ಮತ್ತು ಶರಣಸ್ಥಲವನ್ನು ಹೊಂದಿದ ಶಿವಯೋಗಿಸ್ವರೂಪವಾದ ಸಾಕ್ಷಾತ್ ಪರಶಿವಬ್ರಹ್ಮನಿಗೂ ತನಗೂ ಯಾವುದೇ ಭೇದವನ್ನು ಭಾವಿಸದ ಭಕ್ತನು ಶೀವಯೋಗಿ ಸ್ಥಲ (ಸ್ವರೂಪ)ವಾದ ಮೇಲೆ ಮತ್ತೆ ಅವನು ಹಿಂದಿರುಗದೆ ಮೇಲೇರಿ ಪರಮಾತ್ಮನೊಡನೆ ಬೆರೆತು ಐಕ್ಯಸ್ಥಲದಲ್ಲಿ ಲಿಂಗಾಂಗಸಾಮರಸ್ಯರೂಪಮೋಕ್ಷವಾದ ಪುನರ್ಜನ್ಮರಹಿತವಾದ ಜೀವನ್ಮುಕ್ತಿಯನ್ನು ಹೊಂದುವನು. ಈ ವಿಷಯವನ್ನು ಶ್ರೀ ರೇಣುಕಭಗವತ್ಪಾದಾಚಾರ್ಯರು ಅಗಸ್ತ್ಯ ಮಹರ್ಷಿಗಳಿಗೆ ಬೋಧಿಸಿದ್ದು ಶ್ರೀ ಶಿವಯೋಗಿ ಶಿವಾಚಾರ್ಯರು ತಮ್ಮಿಂದ ವಿರಚಿತ ಸಿದ್ಧಾಂತಶಿಖಾಮಣಿ ಗ್ರಂಥದಲ್ಲಿ ಈ ಕೆಳಗಿನ ಶ್ಲೋಕಗಳಲ್ಲಿ ಪ್ರತಿಪಾದಿಸಿ ನಿರೂಪಿಸಿದ್ದಾರೆ-

**ನ ಪೃಥ್ವಾದೀನಿ ಭೂತಾನಿ ನ ಗ್ರಹಾ ನೈವ ತಾರಕಾಃ ।**
**ನ ದೇವಾ ನ ಮನುಷ್ಯಾಶ್ಚ ನ ತಿರ್ಯಂಚೋ ನ ಚಾಪರೇ ॥**
**ತಸ್ಮಿನ್ ಕೇವಲಚಿನ್ಮಾತ್ರಸತ್ತಾನಂದೈಕಲಕ್ಷಣೇ ।**
**ತ್ವಂತಾಽಹಂತಾದಿಸಂರೂಢಂ ವಿಜ್ಞಾನಂ ಕೇನ ಭಾವ್ಯತೇ ॥**
**ಕೇವಲಂ ಸಚ್ಚಿದಾನಂದಪ್ರಕಾಶಾದ್ವಯ ಲಕ್ಷಣಂ ।**
**ನಿರ್ವಿಕಲ್ಪಂ ಪರಾಕಾಶಂ ಪರಬ್ರಹ್ಮ ಪ್ರಕಾಶತೇ ॥**
**ಜ್ಯೋತಿರ್ಲಿಂಗೇ ಚಿದಾಕಾರೇ ಸ್ವಪ್ರಕಾಶೇ ನಿರಂತರೇ ।**
**ಏಕೀಭಾವಮುಪೇತಸ್ಯ ಕಥಂ ಜ್ಞಾನಸ್ಯ ಸಂಭವಃ ॥**

(ಸಿದ್ಧಾಂತಶಿಖಾಮಣಿ, ೨೦-೫೭, ೫೮, ೫೯, ೬೦)

ಅಲ್ಲಿ ಸ್ಥೂಲವಾದ ಪೃಥಿವ್ಯಾದಿಭೂತಗಳಾಗಲಿ, ಸೂರ್ಯಾದಿಗ್ರಹಗಳಾಗಲಿ,

ಅಶ್ವಿನ್ಯಾದಿ ನಕ್ಷತ್ರಗಳಾಗಲಿ, ದೇವತೆಗಳಾಗಲಿ, ಮನುಷ್ಯನಾಗಲಿ, ಪಶು-ಪಕ್ಷಿಗಳಾಗಲಿ ಅಥವಾ ಬೇರೆ ವಸ್ತುಗಳಾಗಲಿ ಯಾವುವೂ ಇರುವುದಿಲ್ಲ. ಕೇವಲ ಸಚ್ಚಿದಾನಂದ ಸ್ವರೂಪವಾದ ಆ ಪರಬ್ರಹ್ಮದಲ್ಲಿ ತ್ವಂತಾಽಹಂತಾರೂಪ ಭಾವಾದಿಗಳಿಂದ ಕೂಡಿದ ಭೇದಜ್ಞಾನವು ಯಾವನಿಂದ ಭಾವಿಸಲ್ಪಡುವುದು ? ಅಲ್ಲಿ ನೀನು-ನಾನೆಂಬ ಭೇದಜ್ಞಾನವೇ ಇರುವುದಿಲ್ಲವೆಂದು ಭಾವವು. ಕೇವಲ ಸಚ್ಚಿದಾನಂದ ಸ್ವರೂಪವೂ, ಅದ್ವತೀಯವೂ, ನಿರ್ವಿಕಲ್ಪವೂ ಆದ ಪರಬ್ರಹ್ಮವು ಮಹಾಕಾಶಸ್ವರೂಪವಾಗಿ ಪ್ರಕಾಶಿಸುತ್ತದೆ. ಜ್ಯೋತಿರ್ಲಿಂಗಸ್ವರೂಪವೂ, ಚಿತ್ಸ್ವರೂಪವೂ ಆದ ಸ್ವಪ್ರಕಾಶದಲ್ಲಿ ಸಮರಸಭಾವವನ್ನು ಹೊಂದಿದ ಶಿವಯೋಗಿಗೆ ಭೇದಜ್ಞಾನವು ಹೇಗೆ ಉಂಟಾಗುವುದು ? ಎಂದೂ ಉಂಟಾಗುವುದಿಲ್ಲವೆಂದು ಭಾವವು.

ಜಲೇ ಜಲಮಿವ ನ್ಯಸ್ತಂ ವಹ್ನೌ ವಹ್ನಿರಿವಾರ್ಪಿತಃ ।
ಪರಬ್ರಹ್ಮಣಿ ಲೀನಾತ್ಮಾ ವಿಭಾಗೇನ ನ ದೃಶ್ಯತೇ ॥ (ಸಿದ್ಧಾಂತಶಿಖಾಮಣಿ, ೨೦-೬೧)

ನೀರಿನಲ್ಲಿ ನೀರನ್ನು ಬೆರೆಯಿಸಿದಂತೆಯೂ, ಬೆಂಕಿಯಲ್ಲಿ ಬೆಂಕಿಯನ್ನು ಬೆರೆಯಿಸಿದಂತೆಯೂ ಪರಬ್ರಹ್ಮಸ್ವರೂಪ ಮಹಾಲಿಂಗದಲ್ಲಿ ಆತ್ಮನನ್ನು ಲಯಗೊಳಿಸಿದ ಶಿವಯೋಗಿಯು, ಜೀವಭಾವದಿಂದ ದೂರನಾಗಿ ಪರಬ್ರಹ್ಮದಲ್ಲಿ ಸಮರಸಭಾವವನ್ನು ಹೊಂದಿದ ಮೇಲೆ, ಪರಬ್ರಹ್ಮಸ್ವರೂಪಕ್ಕಿಂತ ಭಿನ್ನವಾಗಿ ತೋರುವುದಿಲ್ಲವು. ಇದೇ ಶಿವಾದ್ವೈತ (ಲಿಂಗಾಂಗಸಾಮರಸ್ಯ) ಸಿದ್ಧಾಂತದ ರಸಹಸ್ಯವು.

**"ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇ ಅಸ್ತಂಗಚ್ಛಂತಿ ನಾಮರೂಪೇ ವಿಹಾಯ।**
**ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಮ್॥**
(೩-೨-೮) ಎಂದು ಮುಂಡಕಶ್ರುತಿಯೂ, **"ಅವಿಭಾಗೇನ ದೃಷ್ಟತ್ವಾತ್"** (೪-೪-೪) ಎಂಬ ಬ್ರಹ್ಮಸೂತ್ರವೂ ಇದೇ ಅಭಿಪ್ರಾಯವನ್ನು ಬೋಧಿಸುತ್ತಿರುವುವು.

**ಉಪಸಂಹಾರ :**

ಬ್ರಹ್ಮಸೂತ್ರ ಶ್ರೀಕರಭಾಷ್ಯದ ಸರ್ವವ್ಯಾಖ್ಯಾನಾಧಿಕರಣದಲ್ಲಿ ತಿಳಿಸಿರುವಂತೆ ವೇದಾಂತಗಳು ಅನೇಕ ಬಗೆಯಾಗಿ ಇಂದ್ರಚಂದ್ರಾದ್ಯನೇಕದೇವತೆಗಳನ್ನು ಪ್ರಶಂಸಿಸಿದ್ದರೂ ಅವೆಲ್ಲವೂ ಪರಶಿವಬ್ರಹ್ಮದಲ್ಲಿಯೇ ಸಮನ್ವಯವಾಗುತ್ತವೆ ಎಂದು **"ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ"** ಎಂಬ ಸೂತ್ರವು ತಿಳಿಸುತ್ತದೆ. ಸರ್ವವ್ಯಾಪಕವಾದ ಈ ಬ್ರಹ್ಮವನ್ನು ಹೃದಯದಲ್ಲಿ ನೆಲೆಗೊಳಿಸಬೇಕೆಂದು ಪ್ರತಿಯೊಂದು ಸೂತ್ರದಲ್ಲಿಯೂ ನಿರೂಪಿಸಲಾಗಿದೆ. ಇಷ್ಟೊಂದು ಐಶ್ವರ್ಯ ವೈಭವಗಳಿಂದ ಶೋಭಿಸುವ ಶಿವಲಿಂಗವು ಸಾಧಕನಾದ ಶಿವಾಂಶರೂಪನಾದ ಜೀವಾತ್ಮನು ಆದ ಭಕ್ತನ ಹೃದಯದಲ್ಲಿ ಸ್ಥಿರವಾಗಿ ನೆಲೆಸಿದರೆ ಅದು ದೇಹದ ಎಲ್ಲಾ ಇಂದ್ರಿಯಗಳಲ್ಲೂ ವ್ಯಾಪಿಸಿ ಜೀವನಿಗೆ ತನ್ನೊಡನೆ

ಸಾಮರಸ್ಯವನ್ನು ದೊರಕಿಸುವುದು. ಆದ್ದರಿಂದ ಮಾನವನು ಯಾವ ಕೆಲಸದಲ್ಲಿದ್ದರೂ ಅದರಿಂದ ಕೊಂಚವಾದರೂ ಬಿಡುಗಡೆ ಹೊಂದಿ ನಿರ್ಮಲವಾದ ಮನಸ್ಸಿನಿಂದ ಕರಪೀಠದಲ್ಲಿ ಲಿಂಗಾಧಾರಣೆಯ ಸಂದರ್ಭದಲ್ಲಿ ಗುರುವು ಅನುಗ್ರಹಿಸಿದ ಇಷ್ಟಲಿಂಗವನ್ನು ತಪ್ಪದೇ ನಿತ್ಯವು ಅರ್ಚಿಸಬೇಕು.

ಮಾನವರನ್ನು ಪಾಪಾರ್ಣವದಿಂದ ಪಾರುಗಾಣಿಸಲು ಹಡಗಿನಂತೆ ಭಕ್ತಿಯು ಸಿದ್ಧವಾಗಿ ನಿಂತಿದೆ. ಇಂತಹ ಭಕ್ತಿಯಿಂದ ಕೂಡಿದವನಿಗೆ ಪ್ರಪಂಚದಲ್ಲಿ ಹರಡುತ್ತಿರುವ ರಜಸ್ತಮೋಗುಣಗಳ ಕಾರ್ಯದಿಂದ ಆಗುವ ಫಲವಾದರೂ ಏನಿದ್ದೀತು ? ಚಂಡಾಲನಾಗಲೀ, ನೀಚನಾಗಲೀ, ಮೂರ್ಖನಾಗಲೀ, ಪತಿತನಾಗಲೀ ಶಿವಭಾವವನ್ನು ಹೊಂದಿದರೆ ಸರ್ವರಿಗೂ ಮಾನ್ಯನಾಗುವನು. ಆಧ್ಯಾತ್ಮಸಾಧಕನು ಯಾವ ಕಾರ್ಯದಲ್ಲಿದ್ದರೂ ಹೃದಯದಲ್ಲಿ ಶಿವನನ್ನೇ ಚಿಂತಿಸುತ್ತಿರಬೇಕು. ಭಕ್ತರಲ್ಲದವರಿಗೆ ಲೋಕದಲ್ಲಿ ಏನೊಂದಿಷ್ಟು ಫಲವೂ ದೊರಕಲಾರದು. ಹೀಗೆ ಪಂಚಮಹಾಪಾತಕಿಗಳೂ ಸಹ ಶಿವಲಿಂಗವನ್ನು ಭಕ್ತಿಯಿಂದಲೂ ಸಮಭಾವದಿಂದಲೂ ಅರ್ಚಿಸಿದರೆ ಆಯಾ ಪಾಪಗಳಿಂದ ಬಿಡುಗಡೆ ಹೊಂದುತ್ತಾರೆ. ಆದ್ದರಿಂದ ಪತಿತನೂ ಸಹ ಶಿವನನ್ನು ಸರ್ವಪ್ರಯತ್ನದಿಂದಲೂ ಭಕ್ತಿಯಿಂದಲೂ ಆರಾಧಿಸಬೇಕು. ಭಿಕ್ಷೆಯಿಂದ ಜೀವಿಸುತ್ತ ಜಿತೇಂದ್ರಿಯನಾದ ಭಕ್ತನು ಅರಿಯದೆ ಮಹತ್ತರವಾದ ಪಾಪವನ್ನಾಚರಿಸಿದರೂ ಭಕ್ತಿಯಿಂದಲೂ, ಪಂಚಾಕ್ಷರೀಮಹಾಮಂತ್ರದ ಜಪದಿಂದಲೂ ಶಿವಲಿಂಗವನ್ನಾರಾಧಿಸಿದರೆ ಆ ಪಾಪದಿಂದ ಬಿಡುಗಡೆ ಹೊಂದುತ್ತಾನೆ. ನೀರನ್ನೂ, ಗಾಳಿಯನ್ನೂ ಕುಡಿಯುವವರೂ, ವ್ರತಾಚರಣೆಯಿಂದ ಕೃಶವಾದವರೂ ಇವರೆಲ್ಲರಿಗೂ ಈ ವ್ರತಗಳಿಂದಲೇ ಶಿವಲೋಕವು ದೊರಕುವುದಿಲ್ಲ. ಭಕ್ತಿಯಿಂದಲೂ ಪಂಚಾಕ್ಷರೀ ಮಹಾಮಹಾಮಂತ್ರದಿಂದಲೂ ಯಾವನು ಲಿಂಗವನ್ನು ಅರ್ಚಿಸುವನೋ ಅವನು ಶಿವಲಿಂಗವನ್ನು ಧರಿಸಿ ಶಿವಲೋಕಕ್ಕೆ ಹೋಗುವನು. ಸರ್ವಸ್ವವನ್ನೂ ದಾನ ಮಾಡಿಸುವಂತಹ ಯಜ್ಞಗಳು ಮತ್ತು ತಪಸ್ಸುಗಳೂ ಶಿವಲಿಂಗಾರ್ಚನದ ಅತ್ಯಲ್ಪಾಂಶಕ್ಕೂ ಸಮವಾಗುವುದಿಲ್ಲ. ರುದ್ರನ ಅಂಶದವನಾಗಲೀ ಅಥವಾ ಬೇರೆಯವನಾಗಲೀ ಶಿವಲಿಂಗವನ್ನು ನಿತ್ಯವೂ ಅರ್ಚಿಸಬೇಕು. ಯಾವೊಬ್ಬನು ಪತಿತನೇ ಆಗಲಿ ಅಥವಾ ಮೂಢನೇ ಆಗಲಿ ಪಂಚಾಕ್ಷರೀ ಮಹಾಮಂತ್ರದಿಂದ ಶಿವಲಿಂಗವನ್ನು ಒಂದು, ಎರಡು ಅಥವಾ ಮೂರು ವೇಳೆಗಳಲ್ಲಿಯೂ ಅಂದರೆ ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲ (ತ್ರಿಕಾಲ)ಗಳಲ್ಲಿಯೂ ಅಥವಾ ಸದಾ ಯಾವಾಗಲೂ ಅರ್ಚಿಸುವನೋ ಅವನು ಪಾಪದಿಂದ ಬಿಡುಗಡೆ ಹೊಂದುತ್ತಾನೆ. ಯಾರು ಮಹಾದೇವನನ್ನು ಅರ್ಚಿಸುತ್ತಾರೋ ಅವರು ಗಣೇಶ್ವರರೆನಿಸುತ್ತಾರೆ. ಹುಟ್ಟಿದ ಮೇಲೆ ಯಾವನು ಶಿವಲಿಂಗವನ್ನು ಅರ್ಚಿಸುವುದಿಲ್ಲವೋ ಅವನು ಆತ್ಮದ್ರೋಹಿಯಾಗುವನು ಮತ್ತು ಈ ಸಂಸಾರಸಾಗರದಲ್ಲಿ ಯಾವಾಗಲೂ

ಅಲೆಯುತ್ತಿರುವನು. ದುರ್ಲಭವಾದ ಈ ಮಾನವಜನ್ಮವನ್ನು ಪಡೆದು ಯಾವನು ಲಿಂಗವನ್ನು ಒಳಗೂ ಹೊರಗೂ ಧರಿಸುವುದಿಲ್ಲವೋ ಅವನ ಈ ಜನ್ಮವೇ ನಿಷ್ಫಲವಾಗುವುದು. ಅವನು ಎಂದಿಗೂ ಮೋಕ್ಷವನ್ನು ಹೊಂದಲಾರನು. ಜ್ಞಾನಿಯೂ ಸಹ ಯಾವಾಗಲೂ ಶಿಲಿಂಗವನ್ನು ಹೃದಯದ ಒಳಗೂ ಹೊರಗೂ ಧರಿಸಬೇಕು. ಹೀಗೆ ಯಾವನು ಲಿಂಗವನ್ನು ಧರಿಸುವನೋ ಅವನ ಜನ್ಮವೇ ಸಾರ್ಥಕವಾಗುವುದು. ಅವನೇ ಧನ್ಯನೂ ಮತ್ತು ಶ್ರೇಷ್ಠನೂ ಆಗುವನು. ಹೀಗೆ ಎಲ್ಲಾ ಅಂಗಗಳಲ್ಲೂ ಲಿಂಗದ ಸಂಪರ್ಕವನ್ನು ಇಟ್ಟುಕೊಂಡು ಶಿವಲಿಂಗದಲ್ಲಿಯೇ ಪ್ರಾಣವನ್ನಿಟ್ಟು ಆ ಶಿವಲಿಂಗವನ್ನು ಅರ್ಚಿಸುವವರು ದುಃಖಕ್ಕೆ ಸಿಕ್ಕುವುದಿಲ್ಲ. ಯಾರು ಭೋಗಗಳನ್ನೂ ರಾಜ್ಯವನ್ನೂ ಸ್ವರ್ಗವನ್ನೂ ಬಯಸುವರೋ ಅವರು ಎಲ್ಲಾ ಕಾಲಗಳಲ್ಲೂ ಹೃದಯದಲ್ಲಿರುವ ಶಿವಲಿಂಗವನ್ನು ಅರ್ಚಿಸಬೇಕು. ಸೌಭಾಗ್ಯ, ಸೌಂದರ್ಯ, ಸತ್ಯ, ತ್ಯಾಗ, ಪ್ರಭಾವ, ಶೌರ್ಯ, ಲೋಕದಲ್ಲಿ ಖ್ಯಾತಿ ಇವೆಲ್ಲವೂ ಲಿಂಗಪೂಜಕನಿಗೆ ತಾನಾಗಿಯೇ ಬರುತ್ತವೆ. ಆದ್ದರಿಂದ ಇವುಗಳ ಮೇಲೆ ಆಶೆಯನ್ನಿಡದೆ ನಿತ್ಯಾನಂದನೆನಿಸಿದ ಶಿವನೊಬ್ಬನಲ್ಲಿಯೇ ಮನಸ್ಸಿಟ್ಟು ಸಾಧಕನು ತನ್ನ ಉದ್ಧಾರಕ್ಕಾಗಿ ಹೃದಯದಲ್ಲಿರುವ ಶಿವನೊಡನೆ ಸಮರಸವಾಗಿ ಬೆರೆಯಬೇಕು.

ಹೀಗೆ ಲಿಂಗಧಾರಣ ಮತ್ತು ಅರ್ಚನಗಳ ಬಗ್ಗೆ ಪುರಾಣಾಗಮಗಳಿಂದ ಸಾಧ್ಯವಾದಷ್ಟು ಪ್ರಮಾಣಗಳನ್ನು ಸಂಗ್ರಹಿಸಿ ಪುನರುಕ್ತಿಗೆ ಅವಕಾಶವಿಲ್ಲದಂತೆ ಸಾಧಕರ ಮನಸ್ಸನ್ನು ದೃಢಪಡಿಸಲಿಕ್ಕಾಗಿ ಇಲ್ಲಿ ಕೊಡಲಾಗಿದೆ. ಇವನ್ನು ಯಥಾರ್ಥವಾಗಿ ಗ್ರಹಿಸಿ ಆಚರಿಸುತ್ತ ಸಾಧಕರು ತಮ್ಮ ಜನ್ಮ ಸಾಫಲ್ಯವನ್ನು ಗಳಿಸಿಕೊಳ್ಳಬೇಕಾಗಿದೆ. ಜಗದ್ಗುರುಗಳಾದ ಶ್ರೀ ರೇಣುಕಾದಿ ಪಂಚಾಚಾರ್ಯರೂ ಸಕಲ ಮಾನವರಿಗೂ ಸನ್ಮಂಗಳಗಳನ್ನು ಅನುಗ್ರಹಿಸಲಿ ಎಂದು ದಯಾಮಯರಾದ ಪಾರ್ವತೀಪರಮೇಶ್ವರರನ್ನು ಪ್ರಾರ್ಥಿಸಿ ಲೇಖನವನ್ನು ಸಮಾಪ್ತಿಗೊಳಿಸಲಾಗಿದೆ.

ಶಿವಂ ಭೂಯಾತ್

## ಪರಾಮರ್ಶನಗ್ರಂಥಾಃ


೧. ಶ್ರೀಪತಿ ಪಂಡಿತಾಚಾರ್ಯ ವಿರಚಿತ-ಶ್ರೀಕರಭಾಷ್ಯಮ್ ಪ್ರಾಚ್ಯವಿದ್ಯಾಸಂಶೋಧನಾಲಯಃ, ಮೈಸೂರು, ವಿಶ್ವವಿದ್ಯಾಲಯ ಪ್ರಕಾಶನಮ್, ಮೈಸೂರು-ಸಂಪುಟ ೦೧-೧೯೭೭,೦೨-೧೯೭೮.

೨. ಸ್ವಾಮಿ ತ್ಯಾಗೀಶಾನಂದ ವಿರಚಿತ ಶ್ವೇತಾಶ್ವತರೋಪನಿಷತ್, ಶ್ರೀರಾಮಕೃಷ್ಣಮಠ, ಮಹಿಲಾಪುರಂ, ಮದ್ರಾಸ್, ಭಾರತ, ಆಂಗ್ಲಭಾಷಾ-೧೯-೮೭.

೩. ಸಿದ್ಧಾಂತಶಿಖೋಪನಿಷತ್, ಉಮಚಿಗೀ ಶಂಕರಶಾಸ್ತ್ರಿ ವಿರಚಿತ, ವೀರಶೈವ ಭಾಷ್ಯ, ಶ್ರಿ ಜಗದ್ಗುರು ಉಜ್ಜಯಿನೀ ಸದ್ಧರ್ಮ ಸಿಂಹಾಸನ ಮಹಾ ಸಂಸ್ಥಾನ ಜ್ಞಾನಗುರು ವಿದ್ಯಾಪೀಠ, ಉಜ್ಜಯಿನಿ ೧೯೮೫.

೪. ಮುಂಡಕೋಪನಿಷತ್, ಉಮಚಿಗೀ ಶಂಕರಶಾಸ್ತ್ರಿ ವಿರಚಿತ ವೀರಶೈವ ಭಾಷ್ಯ ಪ್ರಬೋಧ ಪುಸ್ತಕ ಮಾಲಾ, ಮೈಸೂರು ೧೯೭೧.

೫. ಮಹಾನಾರಾಯಣೋಪನಿಷತ್, ವೃಷಭೇಂದ್ರ ಪಂಡಿತ ಶಿವಾಚಾರ್ಯ ವ್ಯಾಖ್ಯಾನ ಸಂಪಾದಕರು ಕಾಶೀ-ವಿದ್ವದ್ ವೀರಮಾಹೇಶ್ವರ ಸಭಾ, ಶ್ರೀಕೇದಾರನಾಥ ಶಿವತತ್ವ ಗ್ರಂಥಮಾಲೆ, ಕಾಶಿ, ೧೯೨೯.

೬. ಶ್ರೀ ಶಿವಯೋಗಿ ಶಿವಾಚಾರ್ಯ ವಿರಚಿತ ಸಿದ್ಧಾಂತಶಿಖಾಮಣಿ, ಪಂಡಿತ ಕಾಶಿನಾಥ ಶಾಸ್ತ್ರಗಳ ಭಾವ ಪ್ರಕಾಶ ವ್ಯಾಖ್ಯಾನ ಪಂಚಾಚಾರ್ಯ ತತ್ವಪ್ರಕಾಶಿತ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು, ೧೯೮೨.

೭. ಶ್ರೀಮಾಯೀದೇವ ವಿರಚಿತ ಅನುಭವ ಸೂತ್ರಮ್, ಓರಿಯಂಟಲ್ ರಿಸರ್ಚ್ ಇನ್ಸಿಟ್ಯೂಟ್, ಮೈಸೂರು, ೧೯೮೩.

೮. ಶ್ರೀ ಮರಿತೋಂಟಾದಾರ್ಯ ವಿರಚಿತ ವೀರಶೈವಾನಂದಚಂದ್ರಿಕೆ. (ವಾದಕಾಂಡ), ಮೂರುಸಾವಿರ ಮಠ ಗ್ರಂಥಮಾಲೆ, ಹುಬ್ಬಳ್ಳಿ, ಶಾಂಘಾಟ್, ಬನಾರಸ್ ಸಿಟಿ, ೧೯೩೬.

೯. ಶ್ರೀನಂದಿಕೇಶ್ವರಶಿವಾಚಾರ್ಯ ವಿರಚಿತ ಲಿಂಗಧಾರಣ ಚಂದ್ರಿಕೆ. ವಾರಣಾಸಿ-ಜಂಗಮವಾಡಿ ಕಾಶಿಮಠ ಪ್ರಕಾಶನಮ್, ಕಾಶಿ, ೧೯೮೮.

೧೦. ಏಕಾದಶೋಪನಿಷದಃ ಈಶಾದ್ಯಷ್ಟನು ಶ್ರೀಮದುದಾಸೀನವರ್ಯಾಮರದಾಸಾಖ್ಯ-ವಿದುಷಾ ವಿರಚಿತಯೋಪನಿಷನ್ಮಣಿ ಪ್ರಭಯಾ ಛಾಂದೋಗ್ಯ-ಬೃಹದಾರಣ್ಯಕ-ಯೋರ್ನಿತ್ಯಾನನ್ದಾಶ್ರಮ ವಿರಚಿತಯಾ ಮಿತಾಕ್ಷರಯ ಕೈವಲ್ಯೇ ಚ ಶಂಕರಾನಂದ ವಿರಚಿತಯ ದೀಪಿಕಯಾ ಸಮಲಂಕೃತಾಃ.

೧೧. ಸ್ವಾಮಿ ಆದಿದೇವಾನಂದ ವಿರಚಿತ–ಬೃಹದಾರಣ್ಯಕೋಪನಿಷತ್ (ಕನ್ನಡ) ರಾಮಕೃಷ್ಣಾಶ್ರಮ, ಯಾದವಗಿರಿ, ಮೈಸೂರು–೨೦೦೪.

೧೨. ಶ್ವೇತಾಶ್ವತರೋಪನಿಷತ್ ವೀರಶೈವಭಾಷ್ಯ ಕನ್ನಡಾನುವಾದ ಸಹಿತ. ವ್ಯಾಖ್ಯಾನ ಡಾ. ಟಿ. ಜಿ. ಸಿದ್ಧಪಾರಾಧ್ಯ.

೧೩. ಶ್ರೀ ನೀಲಕಂಠ ಶಿವಾಚಾರ್ಯ ವಿರಚಿತ ಕ್ರಿಯಾಸಾರಃ ಭಾಗತ್ರಯೋಪೇತಃ, ಮೈಸೂರು ವಿಶ್ವವಿದ್ಯಾಲಯ ಪ್ರಕಾಶನಮ್–೧೯೫೪.

೧೪. ಶೈವೋಪನಿಷದಃ ವಿತ್ ದಿ ಕಾಮೆಂಟರಿ ಆಫ್ ಶ್ರೀ ಉಪನಿಷದ್ ಬ್ರಹ್ಮಯೋಗಿನ್, ಎಡಿಟೆಡ್ ಬೈ ಪಂಡಿತ ಎ. ಮಹಾದೇವಶಾಸ್ತ್ರಿ, ದಿ. ಅಡ್ಯಾರ್ ಲೈಬ್ರರಿ ಅಂಡ್ ರಿಸರ್ಚ್ ಸೆಂಟರ್ ಮದ್ರಾಸ್, ಫಸ್ಟ್ ಎಡಿಷನ್ ೧೯೨೬, ಫಸ್ಟ್ ರೀಪ್ರಿಂಟ್ ೧೯೫೦, ಸೆಕೆಂಡ್ ರೀಪ್ರಿಂಟ್ ೧೯೮೮.

■

ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೨
ಜುಲೈ–ಡಿಸೆಂಬರ್, ೨೦೧೩

# ೭. ಚಂದ್ರ

–ಪ್ರೊ॥ ಜಿ. ಅಬ್ದುಲ್ ಬಷೀರ್*

ರಾಷ್ಟ್ರಕೂಟ ಚಕ್ರವರ್ತಿ (ಕ್ರಿ.ಶ. ೮೧೪–೮೭೭) ಅಮೋಘ ವರ್ಷ ನೃಪತುಂಗನ ಆಶ್ರಯದಲ್ಲಿದ್ದುಕೊಂಡು ಶ್ರೀ ವಿಜಯ ಕವಿ 'ಕವಿರಾಜಮಾರ್ಗ'ವೆಂಬ ಲಕ್ಷಣ ಗ್ರಂಥ (ಅಲಂಕಾರ ಶಾಸ್ತ್ರ)ವೊಂದನ್ನು ರಚಿಸಿದ್ದಾನೆ. ಆತನು ಸಾಹಿತ್ಯವನ್ನು ಗದ್ಯ ಮತ್ತು ಪದ್ಯವೆಂದು ವಿಭಜಿಸಿ ಕನ್ನಡದ ಗದ್ಯಕಥಾ, ಚತ್ತಾಣ ಹಾಗೂ ಬೆದಂಡೆಗಳೆಂಬ ಕಾವ್ಯ ಪ್ರಕಾರಗಳಲ್ಲಿ ಕಾವ್ಯವನ್ನು ರಚಿಸಿದ ಕವಿಗಳ ಪಟ್ಟಿಯನ್ನು ನೀಡಿದ್ದಾನೆ. ಪದ್ಯ ಕಾವ್ಯವನ್ನು ರಚಿಸಿ ಅಸಾಧಾರಣವಾದ ಪ್ರತಿಭೆಯನ್ನು ಪ್ರಕಟಿಸಿದ ಕವಿಗಳ ಪಟ್ಟಿಯನ್ನೊಳಗೊಂಡ ಪದ್ಯ ಹೀಗಿದೆ :

**"ಪರಮ ಶ್ರೀವಿಜಯ ಕವೀ**
**ಶ್ವರ ಪಂಡಿತ ಚಂದ್ರಲೋಕಪಾಲಾದಿಗಳಾ**
**ನಿರತಿಶಯವಸ್ತು ವಿಸ್ತರ**
**ವಿರಚನೆ ಲಕ್ಷ್ಯಂ ತದಾದ್ಯ ಕಾವ್ಯಕ್ಕೆಂದುಂ"** (೧–೩೨)

("ಪರಮಶ್ರೀವಿಜಯ ಕವೀಶ್ವರ ಪಂಡಿತ ಚಂದ್ರ ಲೋಕಪಾಲ ಮುಂತಾದವರ ವಿಸ್ತಾರವಾದ ಕಾವ್ಯಬಂಧವು ಅವರ ಶ್ರೇಷ್ಠ ಇಲ್ಲವೆ ಪ್ರಾಚೀನ ಕಾವ್ಯಕ್ಕೆ ನಿದರ್ಶನ ಅಥವಾ ಕರುಹಾಗಿದೆ"). ಆ ಕಾಲದ ಗದ್ಯ ಕವಿಗಳಂತೆ ಈ ಪದ್ಯ ಕವಿಗಳೂ ಸಾಮಾನ್ಯ ಕವಿಗಳಲ್ಲವೆಂದೂ ಮಹಾಕಾವ್ಯ ಸೃಷ್ಟಿಯಿಂದ ಶ್ರೇಷ್ಠ ಪದವಿಯನ್ನು

*. ನಂ. ೫, ೮ನೇ ಅಡ್ಡರಸ್ತೆ, ಬೈರಸಂದ್ರ, ಜಯನಗರ, ೧ನೇ ಬ್ಲಾಕ್ ಪೂರ್ವ,
ಬೆಂಗಳೂರು–೫೬೦ ೦೧೧. ಮೊ. : ೯೦೦೮೭೬೩೩೩೬.

ಪಡೆದವರಾಗಿದ್ದರೆಂಬುದನ್ನೂ ಈ ಪದ್ಯ ಧ್ವನಿಸುವಂತಿದೆ. ಈ ಪದ್ಯದಲ್ಲಿ ಉಲ್ಲೇಖವಾಗಿರುವ ಶ್ರೀ ವಿಜಯ ಕವಿಯೇ 'ಕವಿರಾಜಮಾರ್ಗ'ದ ಕರ್ತೃವಾಗಿದ್ದಾನೆ. ಇನ್ನುಳಿದ ಕವಿಗಳ ಕಾಲ, ದೇಶ, ಮತ ಹಾಗು ಕೃತಿಗಳ ಬಗ್ಗೆ ಯಾವ ವಿವರಗಳೂ ಲಭಿಸಿಲ್ಲ. ಅವರಲ್ಲಿ ಒಬ್ಬನಾದ 'ಚಂದ್ರ'ನೆಂಬ ಕವಿಯ ಬಗ್ಗೆ ಕೆಲವು ವಿವರಗಳನ್ನು ಸಂಗ್ರಹಿಸಲು ಪ್ರಯತ್ನಿಸಲಾಗಿದೆ.

'ಪಂಡಿತ ಚಂದ್ರ' ಎಂಬಲ್ಲಿನ 'ಪಂಡಿತ' ಮತ್ತು 'ಚಂದ್ರ' ಬೇರೆ ಬೇರೆ ಕವಿಗಳ ಹೆಸರುಗಳಿರಬಹುದು; ಅಥವಾ 'ಪಂಡಿತ ಚಂದ್ರ' ಒಬ್ಬನೇ ಕವಿಯ ಹೆಸರಿರಬಹುದು. 'ಚಂದ್ರ'ನೆಂಬ ಕವಿಗೆ ಕವಿರಾಜಮಾರ್ಗಕಾರನು ಸೇರಿಸಿರಬಹುದಾದ 'ವಿಶೇಷಣ' ಪಂಡಿತ ಎಂಬ ಶಬ್ದವಿರಬಹುದು; ಇಲ್ಲವೆ ಅದು ಬಿರುದಾಗಿರಬಹುದು. ಆದರೆ ಯಾರ ಬಿರುದೋ ಗೊತ್ತಿಲ್ಲ. ವ್ಯಾಕರಣ ಪಂಡಿತನೂ ವೈದ್ಯನೂ ಆಗಿದ್ದ 'ಪೂಜ್ಯಪಾದನೆ' ಈ ಪಂಡಿತನಾಗಿರಬಹುದು. 'ಪಂಡಿತ ಚಂದ್ರ ಲೋಕಪಾಲ' ಎಂಬುದು ಒಬ್ಬ ಕವಿಯ ಹೆಸರಿರುವ ಸಾಧ್ಯತೆಯಿದೆ, ಎಂಬಿವೇ ಮುಂತಾದ ಅಭಿಪ್ರಾಯಗಳು ವ್ಯಕ್ತವಾಗಿವೆ. ಅದೂ ಅಲ್ಲದೆ ಮೇಲಿನ ಪದ್ಯದಲ್ಲಿ ಎಷ್ಟು ಕವಿಗಳ ಹೆಸರುಗಳಿವೆ ಎಂಬುದೂ ಸ್ಪಷ್ಟವಾಗಿ ತಿಳಿಯಲಾಗುವುದಿಲ್ಲ. ಇವರೆಲ್ಲರೂ ಜೈನಧರ್ಮದವರಿರಬಹುದು; ಇಲ್ಲವೆ ಅವರಲ್ಲಿ ಕೆಲವರಾದರೂ ಬೌದ್ಧಧರ್ಮದವರಿರಬಹುದು; "ವೈದಿಕ ಬ್ರಾಹ್ಮಣವು ಕನ್ನಡನಾಡಿನ ಒಂದು ಪ್ರಮುಖ ಧರ್ಮ. ಸಮಾಜದ ಮುಖ್ಯ ಘಟಕವಾಗಿದ್ದ ಈ ಮತೀಯರು ಸಾಹಿತ್ಯ ನಿರ್ಮಿತಿಯಿಂದ ನಿರ್ಲಿಪ್ತರಾಗಿರಲಾರರು. ಅದಕ್ಕಾಗಿ 'ಚಂದ್ರ' ಮೊದಲಾದವರು ವೈದಿಕರಿದ್ದರೆ ಅಚ್ಚರಿಯೇನಲ್ಲ" ಎಂಬ ಅಭಿಪ್ರಾಯವನ್ನು ಡಾ॥ ಎಂ. ಎಂ. ಕಲಬುರ್ಗಿಯವರು ವ್ಯಕ್ತಪಡಿಸಿದ್ದಾರೆ; ಹೀಗಾಗಿ 'ಚಂದ್ರ' ಕವಿ ಭಾಗವತ ಬ್ರಾಹ್ಮಣನಾಗಿದ್ದಿರಬಹುದು. ಪಂಡಿತ ಒಬ್ಬ ಕವಿಯ ಹೆಸರಿರಬಹುದು. (ವೀರ)ಶೈವ ಪಂಡಿತಾರಾಧ್ಯನಾಗಿರಬಹುದು; ಇಲ್ಲವೆ ಜೈನ ಪೂಜ್ಯಪಾದನಾಗಿರಬಹುದು. ಶಾಸನಗಳಲ್ಲಿ ಜೈನ ಆಚಾರ್ಯರ ಹಾಗೂ ಶೈವ ಗುರುಗಳ ಹೆಸರಿನೊಂದಿಗೆ 'ಪಂಡಿತ' ಎಂಬ ಶಬ್ದ ಸೇರಿಕೊಂಡು ಬರುವುದುಂಟು. 'ಚಂದ್ರ' ಕವಿ ನೃಪತುಂಗನ ಸಮಕಾಲೀನನಾಗಿದ್ದಿರಬಹುದು. ಇಲ್ಲವೆ ಅವನಿಗಿಂತ ಒಂದೆರಡು ಶತಮಾನಗಳಷ್ಟು ಪ್ರಾಚೀನನಾಗಿದ್ದಿರಬಹುದು. ಒಟ್ಟಿನಲ್ಲಿ 'ಚಂದ್ರ' ಕವಿಯ ಹೆಸರು, ಮತ, ಕಾಲ, ಆತನು ಬರೆದಿರಬಹುದಾದ ಕೃತಿಗಳ ವಿವರಗಳನ್ನು ತಿಳಿಯುವುದು ಅಷ್ಟು ಸುಲಭದ ಕಾರ್ಯವಲ್ಲ. ಈ ಕವಿಗೆ ಸಂಬಂಧಿಸಿದ ವಿಚಾರಗಳೆಲ್ಲವೂ ಅಜ್ಞಾತವಾಗಿವೆ; ನಿಗೂಢವಾಗಿವೆ.

ಕ್ರಿ.ಶ. ೧೦೩೧ ರ ದುರ್ಗಸಿಂಹನ ಪಂಚತಂತ್ರದ ಪದ್ಯವೊಂದು (೧-೨೩) ಹೀಗಿದೆ :

"ಪೊಸತೆನಿಸಿ ದೇಸೆಯಿಂನವ
ರಸವೆಸೆಯಲ್ಕೊಳ್ಪುವೆತ್ತ ಮಾರ್ಗದಿನಿಳೆಗೇ
ನೆಸೆದುವೊ ಸುಕವಿಗಳೆನೆನೆಗ
ಟ್ದಿಸಗನ ಮನಸಿಜನ ಚಂದ್ರಭಟ್ಟನ ನುಡಿಗಳ್."

ಮೇಲಿನ ಪದ್ಯದಲ್ಲಿ 'ಚಂದ್ರಭಟ್ಟನೆಂಬ ಕವಿಯನ್ನು ಸ್ತುತಿಸಲಾಗಿದೆ. ರುದ್ರಭಟ್ಟ ಕವಿ (ಕ್ರಿ.ಶ. ಸು. ೧೨೦೦) ಜಗನ್ನಾಥ ವಿಜಯದಲ್ಲಿ (೧-೧೦) '.....ಚಂದ್ರಭಟ್ಟನ ಜತಿ' ಎಂದೂ ; ಕೇಶಿರಾಜನು (ಕ್ರಿ.ಶ. ಸು. ೧೨೭೫) ಶಬ್ದಮಣಿ ದರ್ಪಣದಲ್ಲಿ (ಸೂತ್ರ : ೫) 'ಚಂದ್ರಭಟ್ಟ ಶ್ರೀವಿಜಯರ....' ಎಂದೂ: ಅರ್ಹದ್ದಾಸ ಅಥವಾ ರಟ್ಟಕವಿ (ಕ್ರಿ.ಶ. ೧೩೦೦) ರಟ್ಟಮತ (೧-೩೩) ದಲ್ಲಿ 'ಚಂದಿರಭಟ್ಟರ ದಯೆಯಿಂ.... ಮೞೆಯಂ' ಎಂದೂ ಒಬ್ಬ ಚಂದ್ರಭಟ್ಟನನ್ನು ಸ್ಮರಿಸಿಕೊಂಡಿದ್ದಾರೆ. ಕಾವ್ಯ ಸೃಷ್ಟಿಯ ಚಂದ್ರಭಟ್ಟನೊಬ್ಬ ಮಳೆಯ ಶಾಸ್ತ್ರವನ್ನು ಬಲ್ಲ ಚಂದ್ರಭಟ್ಟನೊಬ್ಬ ಎಂದು ಇಲ್ಲಿ ಇಬ್ಬರು ಚಂದ್ರಭಟ್ಟರ ವಿವರಗಳು ಬರುತ್ತವೆ; ಅಥವಾ ಅವರಿಬ್ಬರೂ ಒಬ್ಬ ಕವಿಯೇ ಆಗಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಆದರೆ ಕ್ರಿ.ಶ. ೧೦೪೦ರ ಮದನತಿಲಕದ ಕರ್ತೃ 'ಚಂದ್ರರಾಜನೇ' ಬೇರೆ; ೧೪ನೆಯ ಶತಮಾನದ ಅಶ್ವಶಾಸ್ತ್ರದ ಕರ್ತೃ 'ಅಭಿನವ ಚಂದ್ರನೇ ಬೇರೆ; ಚೌಂಡರಸ ಕವಿಯ (ಕ್ರಿ.ಶ. ೧೩೦೦) ಅಭಿನವ ದಶಕುಮಾರ ಚರಿತೆಯ ಪೂರ್ವಕವಿಸ್ತುತಿಯಲ್ಲಿ ಬರುವ (೧-೧೨) 'ಸುಗಮಾರ್ಥಸ್ಫುಟ ಶಬ್ದ ಸುಂದರ ಕಿರದ್ವಾಕ್ಸಾಂದ್ರನಂ ಚಂದ್ರನಂ' ಎಂಬಲ್ಲಿನ 'ಚಂದ್ರ' ಕಾವ್ಯಸೃಷ್ಟಿಯನ್ನು ಮಾಡಿದ ಚಂದ್ರನೇ ಆಗಿದ್ದಿರಬಹುದು. ಜಾತಿ ತಿಲಕದ ಕರ್ತೃ ಜೈನ ಶ್ರೀಧರಾಚಾರ್ಯನು (ಕ್ರಿ.ಶ. ೧೦೫೦) ಇಳಾದೇವಾನ್ವ ಯಾಬ್ಧಂಬುಜಾರಿನಿಭಂ' (೧-೫) ಎಂದು ಹೇಳಿದ್ದಾನೆ. 'ಇಳಾದೇವಾನ್ವಯ....ಅಂಬುಜಾರಿ' ಎಂಬ ಶಬ್ದಗಳಲ್ಲಿ ಜೈನ ಬ್ರಾಹ್ಮಣನಾದ ಒಬ್ಬ ಚಂದ್ರನ ಪ್ರಸ್ತಾಪ ಮಾಡಿದ್ದಾನೆ. ೩ನೆಯ ಮಂಗರಸ ಕವಿ (ಕ್ರಿ.ಶ. ೧೫೧೦) ತನ್ನ 'ನೇಮಿಜಿನೇಶ ಸಂಗತಿ' ಎಂಬ ಕಾವ್ಯದಲ್ಲಿ 'ದೇವಚಂದ್ರಪ್ರಭರನು ಕೊಂಡಾಡಿದ ಶ್ರೀವಿಜಯರ.....' ಎಂದು ಸ್ಮರಿಸಿಕೊಂಡಿದ್ದಾನೆ. ಇಲ್ಲಿನ 'ದೇವಚಂದ್ರಪ್ರಭ'ನೇ 'ಚಂದ್ರ' ಕವಿಯಾಗಿರಬಹುದೆ ?

'ಚಂದ್ರ' ಎಂಬ ಕವಿಯನ್ನು ಬಹಳಷ್ಟು ಶೈವ ವೈಷ್ಣವ ಕವಿಗಳು ಮತ್ತೆ ಮತ್ತೆ ಕೊಂಡಾಡಿದ್ದಾರೆ; ಆದರೆ ಮುಖ್ಯ ಜೈನ ಕವಿಗಳ ಕಾವ್ಯಗಳಲ್ಲಿ ಈತನ ಉಲ್ಲೇಖ ಬರುವುದಿಲ್ಲ; ಎಲ್ಲೋ ಕೆಲವು ಸಾಮಾನ್ಯ ಜೈನ ಕವಿಗಳ ಕೃತಿಗಳಲ್ಲಿ ಮಾತ್ರ ಈತನ ಉಲ್ಲೇಖ. ಬರುತ್ತದೆ. ಇದನ್ನು ಗಮನಿಸಿದರೆ (ವೈದಿಕ) ಬ್ರಾಹ್ಮಣ ಕವಿಗಳು ಕವಿರಾಜಮಾರ್ಗಕ್ಕೂ ಹಿಂದೆ ಕಾವ್ಯರಚನೆಯನ್ನು ಮಾಡಿದ್ದಿರಬಹುದೆ ? ಎಂಬ ಸಂಶಯ

ಮೂಡುತ್ತದೆ. ಈ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆಗಳು ನಡೆಯಬೇಕಾಗಿದೆ.

ಇಷ್ಟೆಲ್ಲ ಅಂಶಗಳನ್ನು ಹೇಳಿದರೂ ಕವಿರಾಜಮಾರ್ಗದಲ್ಲಿ ಉಲ್ಲೇಖವಾಗಿರುವ 'ಚಂದ್ರ' ಕವಿ ಯಾರೆಂಬ ಬಗ್ಗೆ ಖಚಿತವಾಗಿ ಹೇಳಲು ಸಾಧ್ಯವಾಗುವುದಿಲ್ಲ.

ಒಟ್ಟಾರೆ ಕವಿರಾಜಮಾರ್ಗದ ಕರ್ತೃ ಶ್ರೀವಿಜಯನ ಪ್ರಕಾರ 'ಚಂದ್ರ' ಮತ್ತಿತರ ಕವಿಗಳು ಕನ್ನಡ ಸಾಹಿತ್ಯದ ಯುಗ ಪುರುಷರು; ದೇಸಿ ಕಾವ್ಯ ಪ್ರಕಾರಗಳನ್ನು 'ನೆಗಱ್ತೆಯ ಕಬ್ಬದೊಳ್ ಒಡಂಬಡಿಸಿದ ಆದ್ಯರು'.

■

'ಕರ್ನಾಟಕ ಲೋಚನ' ಒಂದು ವಿದ್ವತ್ ಪತ್ರಿಕೆ. ಮುಖ್ಯವಾಗಿ ಸಂಶೋಧನೆ, ಪ್ರಾಚೀನ ಕನ್ನಡ ಸಾಹಿತ್ಯ, ಸಂಸ್ಕೃತಿ ವಿವೇಚನೆಗೆ ಮೀಸಲಾಗಿದೆ. ಕನ್ನಡ ನಾಡಿನ ಹಿರಿಯ-ಕಿರಿಯ ಸಾಹಿತ್ಯ ಚಿಂತಕರ ಮೂಲ ಆಶಯಕ್ಕೆ ಧಕ್ಕೆ ಬಾರದ ಹಾಗೆ ಉಪಯುಕ್ತ ಲೇಖನಗಳನ್ನು ಬರೆದುಕೊಡುವುದರ ಮೂಲಕ ಪತ್ರಿಕೆ ನಡೆಯುತ್ತಿದೆ. ಸಮಗ್ರ ಕನ್ನಡ ಸಾಹಿತ್ಯದ ಸಂವರ್ಧನೆಗೆ ಸಹಾಯಕ ವಾದ 'ಲೋಚನ' ಸಂಶೋಧನೆ, ಸಂಸ್ಕೃತಿ ಆಸಕ್ತರಿಗೆ ಉಪಯುಕ್ತವಾಗಿದೆ. ಇದರ ಉಪಯೋಗವನ್ನು ಕನ್ನಡ ಸಹೃದಯರು ಬಳಸಿ ಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ.

**ಡಾ॥ ಪಿ. ವಿ. ನಾರಾಯಣ**
ಅಧ್ಯಕ್ಷರು
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ